# ವೈದ್ಯರ ಕೈಪಿಡಿ

ಬಹೋಲ ಫಾರ್ಮಸ್ಯೂಟಿಕಲ್ಸ್ ಕಂ.,
ಕುಂಭಕೋಣಂ (ದ. ಭಾರತ)
(ವೈದ್ಯರಿಗೆ ಮಾತ್ರ)




ಅಧಿಕೃತ ಹಂಚಿಕೆದಾರರು :
ಇಂಡಿಯನ್ ಹೋಮಿಯೋಪತಿ ಇನ್ಸ್‌ಟಿಟ್ಯೂಟ್
(ಪ್ರಧಾನ ಕಛೇರಿ : ಕುಂಭಕೋಣಂ)
ಬೆಂಗಳೂರು-9
ಮದರಾಸು-1 ಮಧುರೈ-1 ಸೇಲಂ-1

# ವೈದ್ಯರ ಕೈಪಿಡಿ

(ವೈದ್ಯರಿಗೆ ಮಾತ್ರ)

ಬಹೋಲ ಫಾರ್ಮ ಸ್ಯೂಟಿಕಲ್ಸ್ ಕಂಪೆನಿ

ಕುಂಭಕೋಣಂ (ದ. ಭಾರತ)




ಅಧಿಕೃತ ಹಂಚಿಕೆದಾರರು :

ಇಂಡಿಯನ್ ಹೋಮಿಯೋಪತಿ ಇನ್ಸ್ಟಿಟ್ಯೂಟ್

(ಪ್ರಧಾನ ಕಛೇರಿ : ಕುಂಭಕೋಣಂ)

ಬೆಂಗಳೂರು–9

ಗ್ರಾಮ್ಸ್ : ಬಹೋಲ ಫೋನ್ 71255

ಪ್ರಧಾನ ಕಛೇರಿ :

## ಇಂಡಿಯನ್ ಹೋಮಿಯೋಪತಿ ಇನ್ಸ್‌ಟಿಟ್ಯೂಟ್

ಕುಂಭಕೋಣಂ

ಫೋನ್ ನಂ : 44 ಗ್ರಾಮ್ಸ್ : ಬಹೋಲ

ಶಾಖಾ ಕಛೇರಿಗಳು :

**6, ಸ್ಪ್ರಿಂಗರ್ಸ್ ಸ್ಟ್ರೀಟ್**

ಮಂದ್ರಾಸ್–1

ಫೋನ್ ನಂ : 23650 ಗ್ರಾಮ್ಸ್ : ಬಹೋಲ

**30, ಸಂಭಂದಮೂರ್ತಿ ಸ್ಟ್ರೀಟ್**

ಮಧುರೈ–1

ಫೋನ್ ನಂ : 3441 ಗ್ರಾಮ್ಸ್ : ಬಹೋಲ

**ಅರುಣಾಚಲ ಆಚಾರಿ ಸ್ಟ್ರೀಟ್**

ಸೇಲಂ–1

ಫೋನ್ ನಂ : 2653 ಗ್ರಾಮ್ಸ್ : ಬಹೋಲ

# ಬಹೋಲ ಫಾರ್ಮಸ್ಯೂಟಿಕಲ್ಸ್ ಕಂಪೆನಿ

"ಹೋಮಿಯೋ ಹೌಸ್"
ಕುಂಭಕೋಣಂ
(ದಕ್ಷಿಣ ಭಾರತ)

ಪ್ರಿಯ ಡಾಕ್ಟರಿಗೆ,

"ವೈದ್ಯರ ಕೈಪಿಡಿ" ಎಂಬ ಈ ಉಪಯುಕ್ತ ಕಿರಿ ಹೊತ್ತಿಗೆಯನ್ನು ನಿಮ್ಮ ಕೈಯಲ್ಲಿಡಲು ತುಂಬ ಹರ್ಷಿಸುತ್ತೇವೆ. ಈ ಸೂಚೀ ಪತ್ರದಲ್ಲಿ ಕಳೆದ ಕಾಲು ಶತಮಾನಕ್ಕಿಂತಲೂ ಮಿಗಿಲಾಗಿ ಪ್ರಚಾರದಲ್ಲಿರುವ ಅತ್ಯುಪಯುಕ್ತ ಹೋಮಿಯೋಪತಿ ಮಿಶ್ರ ಔಷಧಿಗಳ–ವಿಶೇಷ ತಯಾರಿಕೆಗಳ ವಿವರವಾದ ಪರಿಚಯವಿದೆ. ಈ ಔಷಧಿಗಳು ನಿರೀಕ್ಷಿತ ಫಲವೀಯುವುದರಲ್ಲಿ ಹೆಸರು ವಾಸಿಯನ್ನು ಪಡೆದಿವೆ.

ನಾವು ಯಾವಾಗಲೂ ಔಷಧಿಯ ಗುಣಕ್ಕೇ ಪ್ರಾಶಸ್ತ್ಯವೀಯುತ್ತೇವೆ. ಔಷಧಿಯನ್ನು ತಯಾರಿಸುತ್ತಿರುವಾಗ ಹೆಜ್ಜೆ ಹೆಜ್ಜೆಯಲ್ಲೂ ಅದನ್ನು ಪರೀಕ್ಷಿಸಿ–ತೃಪ್ತಿಕರವಾಗಿ ಕಂಡನಂತರವೇ ಅದನ್ನು ಹೊರಕ್ಕೆ ಮಾರಾಟಕ್ಕೆ ತರುತ್ತೇವೆ.

ನಮ್ಮ ಸಂಸ್ಥೆಯಲ್ಲಿ ತಯಾರಾದ ಔಷಧಿಗಳು ಶ್ರೇಷ್ಠ ದರ್ಜೆಯವು. ಹೇಗೆಂದರೆ–ಔಷಧಿಗಾಗಿ ಉಪಯೋಗಿಸುವ ಮೂಲ ವಸ್ತುವು ಉತ್ತಮ ತರಗತಿಯದು. ಪೂರ್ಣ ಪಕ್ವಗೊಂಡದ್ದು. ಅದನ್ನು ಹೋಮಿಯೋಪತಿಯ ಸಿದ್ಧಾಂತಕ್ಕನುಸರಿಸಿ ವೈಜ್ಞಾನಿಕ ಪದ್ಧತಿಯಲ್ಲಿ ನಿಷ್ಣಾತ ಶಾಸ್ತ್ರಜ್ಞರ ಮೇಲ್ವಿಚಾರಣೆಯಲ್ಲಿ ತಯಾರಿಸಲ್ಪಡುವುದು. ಪ್ರತಿ ಘಟ್ಟದಲ್ಲೂ ಎಚ್ಚರಿಕೆಯನ್ನು ವಹಿಸಲಾಗುವುದು.

'ಬಹೋಲ' ಬ್ರಾಂಡಿನ ಔಷಧಿಯನ್ನು ಸೂಚಿಸುವಾಗ ನಿಮ್ಮ ರೋಗಿಗೆ ಹಿತವಾದ ಔಷಧಿಯನ್ನೇ ಆರಿಸಿರುವಿರೆಂಬುದರಲ್ಲಿ ಸಂಶಯವಿಲ್ಲ. ಆ ಔಷಧಿಯು ನಿಮ್ಮ ರೋಗಿಯನ್ನು ತಪ್ಪದೆ ಸ್ವಸ್ತಗೊಳಿಸುವುದೆಂಬ ವಿಚಾರದಲ್ಲಿ ನಾವು ಭರವಸೆ ನೀಡುತ್ತೇವೆ. ನೀವು ಸರಿಯಾದ ಬಹೋಲ ಬ್ರಾಂಡಿನ ಔಷಧಿಯನ್ನು ಆರಿಸಿಕೊಟ್ಟಿದ್ದಾದರೆ ನಿಮಗೆ ಯಾವ ಕೇಸಿನಲ್ಲೂ ಸೋಲಾಗಲಾರದು.

ಹಿಂದಿನ ನಿಮ್ಮ ಸರಕಾರಕ್ಕೆ ನಾವು ಬಹು ಕೃತಜ್ಞರಾಗಿದ್ದೇವೆ. ಇದೇ ಬಗೆಯ ನಿಮ್ಮ ಆತ್ಮೀಯ ಸಹಕಾರವನ್ನು ಮುಂದೆಂದೂ ಬಯಸುತ್ತೇವೆ.

ನಿಮ್ಮ
ಚಿರ ವಿಶ್ವಾಸಿ
ಡಾ|| ವಿ. ಆರ್. ಮೂರ್ತಿ
ಮ್ಯಾನೇಜಿಂಗ್ ಡೈರೆಕ್ಟರ್

# ಪ ರಿ ವಿ ಡಿ

# ಆಲ್ಫಾಬೆಕ್ಸ್ (ದ್ರವ)

## (ALFABEX -(Liquid)

ಹೆಸರಾಂತ ಹೋಮಿಯೋಪತಿಯ ಆಲ್ಫಾಲ್ಫಾ ಟಾನಿಕ್ಕಿನೊಡನೆ ಅನ್ನಾಂಗಗಳೂ ಬೆರತ ಈ ಸರ್ವ ಶ್ರೇಷ್ಠವಾದ ಶಕ್ತಿವರ್ಧಕವು ಎಲ್ಲಾ ಬಗೆಯ ನಿತ್ರಾಣ–ನಿಶ್ಯಕ್ತಿಯ ಸಂದರ್ಭಗಳಲ್ಲೂ ಉಪಯೋಗಿಸಬಹುದು.

ಕಳೆದ 50 ವರ್ಷಗಳಿಂದಲೂ ಆಲ್ಫಾಲ್ಫಾ ಟಾನಿಕ್ಕು ಬಳಕೆಯಲ್ಲಿದ್ದು ಉತ್ತಮ ಫಲವನ್ನಿತ್ತಿದೆ. ಇದೀಗ ಈ ಟಾನಿಕ್ಕಿನೊಡನೆ ಅನ್ನಾಂಗವೂ ಬೆರತಿರುವುದು.

ಸಂಯೋಜನೆ: ಆಲ್ಫಾಬೆಕ್ಸ್ ಶಕ್ತಿವರ್ದಕದಲ್ಲಿ ಆಲ್ಫಾಲ್ಫಾ, ಅವೀನಾ ಸಟೀವಾ, ಹೈಡ್ರಾಸ್ಟಿಸ್, ಅಶ್ವಗಂಧಾ. ಚೈನಾ ಹಾಗೂ ಬಿ ಅನ್ನಾಂಗವೂ ಬೆರಸಲ್ಪಟ್ಟಿರುವುದು. ಸೇವಿಸಲು ಬಹು ರುಚಿಯಾಗಿರುವುದು.

ಚಿಹ್ನೆಗಳು: ಅನ್ನಾಂಗಗಳ ಕೊರತೆಯೊಡನೆ ಕೂಡಿರುವಂತಹ ಕರುಳು–ಜಠರಾಶಯದ ಕ್ರಿಯಾಲೋಪ, ಜೀರ್ಣಕೋಶದ ಉಪದ್ರವ, ಚರ್ಮ ವ್ಯಾಧಿ, ತುಟಿ ಹಾಗೂ ಬಾಯಂಚಿನ ವ್ರಣಗಳಿಗೆ ಬಹು ಮುಖ್ಯವಾದದು, ಅಲ್ಲದೆ ವ್ಯಾಧಿಯ ನಂತರದ ನಿತ್ರಾಣ ಸಮಯದಲ್ಲೂ ಗರ್ಭ ಕಾಲ ಹಾಗೂ ಮಗುವಿಗೆ ಹಾಲೂಡಿಸುವ ಸಮಯದಲ್ಲೂ ತಪ್ಪದೆ ಕೊಡಬೇಕೆಂದು ಶಿಫಾರಸು ಮಾಡಲ್ಪಟ್ಟಿರುವುದು.

ಪ್ರಮಾಣ: ಒಂದು ಚಹಾ ಚಮಚೆಯಷ್ಟು ಟಾನಿಕ್ಕನ್ನು ತುಸ ನೀರಿನಲ್ಲಿ ಬೆರಸಿ ದಿನಕ್ಕೆ ಮೂರು ವೇಳೆಗಳಂತೆ ತೆಗೆದುಕೊಳ್ಳಬೇಕು. ಫಲ ತ್ವರೆಯಲ್ಲಿಯೇ ದೊರೆಯಲು ವೈದ್ಯರು ವೇಳೆಗೆ m. 1. ವರೆಗೆ ಕೊಡಲು ಆದೇಶ ನೀಡಬಹುದು.

## ಬಹೋಲೆಪ್
## (BAHOLEP)

ಹೋಮಿಯೋಪತಿಯ ಮುಖ್ಯ ಔಷಧಿಗಳು ಅಡಗಿರುವ ಈ ಮಿಶ್ರಣವು ತೊನ್ನು ಹಾಗೂ ಅನೆಕಾಲಿನ ವ್ಯಾಧಿಗಳಿಗೆ ಅತ್ಯುತ್ತಮವಾದುದು. ಈ ಔಷಧಿಗಳನ್ನು ಆರಂಭ ಕಾಲದ ರೋಗಿಗಳ ಮೇಲೂ ಮತ್ತು ಉಗ್ರ ಸ್ವರೂಪದ ರೋಗಿಗಳ ಮೇಲೂ ಪ್ರಯೋಗಿಸಿ ಪರೀಕ್ಷಿಸಲಾಗಿದೆ. ಫಲ ಉತ್ತಮ ಮಟ್ಟದ್ದಿರುವುದು. ಕೆಲವು ಕೇಸುಗಳಲ್ಲಿ ಫಲ ತ್ವರೆಯಲ್ಲಿಯೇ ಸಿಕ್ಕಿರುವುದು. ಉಳಿದ ಕೆಲವಕ್ಕೆ ಫಲ ನಿಧಾನವಾಗಿ ದೊರಕಿರುವುದು.

ಸಂಯೋಜನೆ : ಹೋಂಗ್‌ನಾನ್, ಕಾಲೋಟ್ರೋಪಿಸ್, ಎಲಿಯಸ್ ಜಿ, ಪೈಪರ್ ಮೆಥಿಸ್ಟಿಕಂ, ಹುರ ಬ್ರೆಜಿಲೆನ್‌ಸಿಸ್ ಇತ್ಯಾದಿ.

ಪ್ರಮಾಣ : ವೇಳೆಗೆ ಒಂದು ಮಾತ್ರೆಯಂತೆ ದಿನಕ್ಕೆ 3 ವೇಳೆಗಳಂತೆ ಕೊಡುತ್ತಾ ಬರಬೇಕು.

## ಡಿಲೆಂಡ್
## (DELEND)

ಕ್ಷೀಣಾರ್ತವ (Amenorrhoea) ಕ್ಕೆ ಅನೇಕ ಕಾರಣಗಳಿರಬಹುದು. ಶಾರೀರಕ ಕಾರಣಗಳು ಕೆಲವಕ್ಕಿದ್ದರೆ ಮಾನಸಿಕ ಕಾರಣಗಳು ಕೆಲವಕ್ಕಿರುವುವು.

ರೋಗ ಸ್ವರೂಪದ ಕ್ಷೀಣಾರ್ತವನ್ನು ಹೋಮಿಯೋಪತಿಯ ತತ್ವದ ತಳಹದಿಯ ಮೇಲೆಯೇ ಔಷಧಿಯನ್ನು ಆರಿಸಬೇಕಾಗಿರುವುದು. ಆದರೆ ವೈದ್ಯರ ಬಳಿ ಬರುವ ಬಹುಮಟ್ಟಿನ ಕ್ಷೀಣಾರ್ತವ ಕೇಸುಗಳು ಬರೀ ಮಾನಸಿಕ ಕಾರಣಗಳದ್ದಾಗಿಯೇ ಇರುವುದು.

ಕ್ಷೀಣಾರ್ತವಕ್ಕೆ ಹೋಮಿಯೋಪತಿಯಲ್ಲಿ ಕೆಲವು ಮುಖ್ಯವಾದ ಔಷಧಿಗಳಿವೆ.ಅವುಗಳ ಸೇವನೆಯಿಂದ ಅತಿ ತ್ವರೆಯಲ್ಲಿ ಮುಟ್ಟು ಕಾಣಿಸಿಕೊಳ್ಳುವುದು.

ಡಿಲೆಂಡ್ ಔಷಧಿಯಲ್ಲಿ ಪಲ್ಸಟಿಲ್ಲ, ಗ್ರ್ಯಾಫೈಟೀಸ್, ನೇಟ್ರಂ ಮ್ಯೂರ್, ಪಿನಸ್ ಇತ್ಯಾದಿ ಔಷಧಿಗಳು ನಿರ್ದಿಷ್ಟ ಸತ್ವದಲ್ಲಿ ಮಿಶ್ರಗೊಳಿಸಲ್ಪಟ್ಟಿದೆ. ಈ

ಸಂಯೋಗದ ಸೇವನೆಯಿಂದ ತಡೆಯಲ್ಪಟ್ಟಿರುವ ಮುಟ್ಟು ಸಹಜವಾಗಿ ಬೇರಿತರ ಉಪದ್ರವಗಳಾಗದೆ ಮುಟ್ಟು ಕಾಣಿಸಿಕೊಳ್ಳುವುದು.

ಪ್ರಮಾಣ : ವೇಳೆಗೆ ಒಂದು ಮಾತ್ರೆಯಂತೆ ಪ್ರತಿ 4 ಘಂಟೆಗೊಮ್ಮೆ ಯಂತೆ ಫಲ ದೊರೆಯುವವರೆಗೆ ಉಪಯೋಗಿಸಬಹುದು. ಅಗತ್ಯ ಒದಗಿದರೆ ಮಾತ್ರೆಗಳ ಪ್ರಮಾಣಗಳನ್ನು ಎರಡರಷ್ಟು ಮಾಡಬಹುದು. ಇದರಿಂದ ಅಪಾಯವೇನಿಲ್ಲ. ಹಾಗೊಮ್ಮೆ ಹೊಸ ಚಿಹ್ನೆಗಳೇನಾದರೂ ಅಪರೂಪವಾಗಿ ಕೆಲವರಲ್ಲಿ ಕಾಣಿಸಿಕೊಂಡರೆ ಒಮ್ಮೆಲೇ ಔಷಧಿಯನ್ನು ನಿಲ್ಲಿಸಬೇಕು. ಯಾವ ಔಷಧಿಯನ್ನು ಕೊಡಬೇಕಾಗಿಲ್ಲ.

ಡಿಲೆಂಡ್ ಔಷಧಿಯನ್ನು ಸಾಮಾನ್ಯ ಮತ್ತು ವಿಶೇಷ ಎಂದು ಎರಡು ರೀತಿಯಲ್ಲಿ ತಯಾರಿಸಲಾಗಿರುವುದು. ಸಾಮಾನ್ಯಕ್ಕಿಂತ ವಿಶೇಷ ಮಾತ್ರೆಯು ಹೆಚ್ಚು ಬಲಶಾಲಿಯಾಗಿರುವುದು.

**ಎಚ್ಚರಿಕೆ: ಡಿಲೆಂಡ್ ಸಾಮಾನ್ಯ ಅಥವ ಡಿಲೆಂಡ್ ವಿಶೇಷ ಮಾತ್ರೆ** ಗಳನ್ನು ಮುಟ್ಟು ತಡೆದಿರುವ ಕಾರಣ–ಗರ್ಭವೆಂದು ಕಂಡುಬಂದರೆ ಅಂಥವರಿಗೆ ಖಂಡಿತ ಕೊಡಕೂಡದೆಂದು ವೈದ್ಯರಿಗೆ ಸಲಹೆ ಈಯುತ್ತೇನೆ. ಕೆಲವು ಕೇಸು ಗಳಲ್ಲಿ ಗರ್ಭಪಾತ (Abortion) ವಾಗುವುದು.

## ಡಿವೈನ್ (DEVINE)

(ಪೌರುಷತ್ವ ಕಡಿಮೆ ಇರುವವರಿಗೆ)

**ಸಂಯೋಗ :** ಆಸಿಡ್‌ಫಾಸ್, ಯೊಹಿಂಬಿನ್, ಅಗ್ನಸ್ ಕಾಸ್ಟಸ್, ಸಬಾಲ್ ಸೆರುಲೇಟಾ, ಅವೀನಾ ಸಟ್, ಸ್ಕ್ಯೂಪರ್ ಲ್ಯೂಟ್, ಒನೋಸ್ ಮೋಡ್, ಡಾಮಿಯಾನ ಇತ್ಯಾದಿ.

ಡಿವೈನ್ ಔಷಧವು ಭಾರತೀಯ ಕೆಲ ಅಪೂರ್ವ ಮೂಲಿಕೆಗಳನ್ನು ಹೋಮಿಯೋಪತಿ ರೀತ್ಯಾ ಸತ್ವಗೊಳಿಸಿ ಸಮ್ಮಿಶ್ರಗೊಳಿಸಲ್ಪಟ್ಟಿರುವುದು.

ಈ ಅಪೂರ್ವ ಔಷಧವು ಸ್ತ್ರೀ ಪುರುಷರಿಬ್ಬರಿಗೂ ಅವರ ದಾಂಪತ್ಯ ಜೀವನದಲ್ಲಿ ಪೂರ್ಣ ಸುಖ ಕಾಣಲು ಅಗತ್ಯ ಬೀಳುವುದು.

**ಚಿಹ್ನೆಗಳು :** ವಿಪರೀತ ಆಯಾಸ, ಸ್ತ್ರೀ ಪುರುಷರಿಬ್ಬರಿಗೂ ರತಿಯಲ್ಲಿ ನಿತ್ರಾಣ, ನಪುಂಸಕತ್ವ, ಸ್ವಪ್ನಸ್ಖಲನ, ರತಿ ಸಮಯದಲ್ಲಿ ಲಿಂಗವು ಪೂರ್ಣ

ಸಟೆಯುವುದಿಲ್ಲ. ಸಂಭೋಗ ಸಮಯದಲ್ಲಿ ಸೊರಗಿಬೀಳುವುದು, ನರಗಳ ದೌರ್ಬಲ್ಯ ಇತ್ಯಾದಿ.

ಪ್ರಮಾಣ : 7½ ಗ್ರೈಯಿನ್ ಪ್ರಮಾಣದಲ್ಲಿ ತಯಾರಾದ ಈ ಮಾತ್ರೆಗಳನ್ನು ವೇಳೆಗೆ 1 ಮಾತ್ರೆಯಂತೆ ದಿನಕ್ಕೆ 3 ವೇಳೆಗಳಂತೆ ಕೊಡುತ್ತಾ ಬರಬಹುದು. ಫಲವು ತ್ವರೆಯಲ್ಲಿ ದೊರೆಯಲು ವೇಳೆಗೆ 2 ಮಾತ್ರೆಗಳಂತೆ ದಿನಕ್ಕೆ ಮೂರು ವೇಳೆಗಳಂತೆ ಕೊಡುತ್ತಾ ಬರಬಹುದು ಅಥವ ವೇಳೆಗೆ ಒಂದು ಮಾತ್ರೆಯಂತೆ ದಿನಕ್ಕೆ 6 ವೇಳೆಗಳಂತೆ ಕೊಡುತ್ತಾ ಬರಬಹುದು.

ಸೂಚನೆ : 16 ವರ್ಷಕ್ಕೆ ಕಡಿಮೆ ಇರುವ ಹೆಣ್ಣು ಗಂಡುಗಳಿಗೆ ಈ ಮಾತ್ರೆಗಳನ್ನು ಕೊಡಬಾರದು

## ಡಯರಾಜ್ (DIARAJ)

ಸಂಯೋಗ : ಜಿಮ್ನಿಮಾ, ಸಿಲ್ವಿಸ್ಟ್ರೇ, ಯೂಜೆನಿಯಾ ಜಂಬೋ, ಮೆಮೋರ್ಡಿಕಾ ಮ್ಯೂರಿಕಾಟಾ, ಏಗೆಲ್ ಮಾರ್ಮೆಲೋಸ್ ಇತ್ಯಾದಿ.

ಮಧು ಮೇಹಕ್ಕೆ ಇದೊಂದು ನೂತನ ಔಷಧ. ಈ ಔಷಧಿಯನ್ನು ಭಾರತೀಯ ಅಪೂರ್ವ ಮೂಲಿಕೆಗಳಿಂದ ಹೋಮಿಯೋಪತಿಯ ಪದ್ಧತಿಯ ಪ್ರಕಾರ ತಯಾರಿಸಿದ ಔಷಧ. ಈ ಔಷಧಿಯ ಕ್ರಮವಾದ ಸೇವನೆಯಿಂದ ಮೂತ್ರದಲ್ಲಿಯ ಸಕ್ಕರೆಯ ಅಂಶವನ್ನು ಬೇರಾವ ಉಪದ್ರವಕ್ಕೂ ಅವಕಾಶ ಕೊಡದೆ ತಗ್ಗಿಸುವುದು.

ಪ್ರಮಾಣ : ವೇಳೆಗೆ 1 ಮಾತ್ರೆಯಂತೆ ದಿನಕ್ಕೆ 3 ವೇಳೆಗಳಂತೆ ಸೇವಿಸುತ್ತಾ ಬರಬೇಕು.

## ಡೈಬೆಟ್ (DIBET)

ಸಂಯೋಗ : ಸೈಸಿಜಿಯಂ ಜಂಬೋಲನಂ, ಅಂಬ್ರೋಮಾ ಆಗಸ್ಟಾ, ಆರ್ಸನಿಕಂ ಬ್ರೋಮೇಡಂ ಇತ್ಯಾದಿ.

ಈ ಔಷಧವು ಎಲ್ಲಾ ಬಗೆಯ ಮಧು ಮೇಹ ವ್ಯಾಧಿಗೆ ಉತ್ತಮವಾದದ್ದು. ಈ ಔಷಧಿಯನ್ನು ಬಿಡದೆ ಕೆಲಕಾಲದವರೆಗೆ ಕ್ರಮವಾಗಿ ಸೇವಿಸುತ್ತಾ

ಬಂದರೆ ತಪ್ಪದೆ ಉತ್ತಮ ಫಲವನ್ನೀಯುವುದು. ಮಧು ಮೇಹದ ಚಿಹ್ನೆಗಳಾದ ದಾಹ, ಮೂತ್ರದ ಪ್ರಮಾಣ ಎಲ್ಲವನ್ನೂ ಕ್ರಮಪಡಿಸುವುದು. ಆಯಾಸವನ್ನು ನಿತ್ರಾಣವನ್ನೂ ನೀಗಿಸಿ ಹೊಸ ಚೇತನವನ್ನೀಯುವುದು. ಈ ಔಷಧಿಯು ಬರೀ ಮೂತ್ರದಲ್ಲಿಯ ಸಕ್ಕರೆಯನ್ನಷ್ಟೇ ಕಡಿಮೆಪಡಿಸುವುದಲ್ಲದೆ, ಬಿಡದೆ ಹೆಚ್ಚು ಕಾಲ ಸೇವಿಸುತ್ತಾ ಬಂದರೆ ವ್ಯಾಧಿಯನ್ನೇ ಪೂರ್ಣವಾಗಿ ಗುಣಗೊಳಿಸುವುದು–ಆದರೆ ವ್ಯಾಧಿಯು ಪ್ರಾರಂಭ ಮಟ್ಟದಲ್ಲಿದ್ದರೆ ಮಾತ್ರ.

ಪ್ರಮಾಣ : 10 ತೊಟ್ಟುಗಳಷ್ಟು ಔಷಧಿಯನ್ನು $\frac{1}{2}$ ಔನ್ಸ್ ನೀರಿನಲ್ಲಿ ಬೆರಸಿ ದಿನಕ್ಕೆ 3 ವೇಳೆಗಳಂತೆ ಸೇವಿಸುತ್ತಾ ಬರಬೇಕು.

**ಸೂಚನೆ :** ಡೈಬೆಟ್ ದ್ರವ ಔಷಧಿಯೊಡನೆ ಡಯುರಾಜ್ ಮಾತ್ರೆಗಳನ್ನು ಬದಲಿಸಿ ಸೇವಿಸುತ್ತಾ ಬಂದರೆ ತ್ವರೆಯಲ್ಲಿಯೇ ಉತ್ತಮ ಫಲ ದೊರೆಯುವುದು.

## ಎಪಿಲ್ಕೋ (EPILCO)

**ಸಂಯೋಗ :** ಅಬಿಸಿಂಥಿಯಂ, ಆರ್ಟಿಮಿಶಿಯ ಸೋಲಾನವಸ್ಕಾರ್, ಪೆರಂ, ಸೈನಡ್, ಹೈಡ್ರೋಸೈನಾಲ್, ಸರ್ಪ್, ಓನೆಂಥೆಕ್ರೊಕಟಾ ಇತ್ಯಾದಿ.

ಎಪಿಲ್‌ಕೊ–'ಬಹೋಲ' ತಯಾರಿಸಿದ (Epilepsy) ಅಪಸ್ಮಾರಕ್ಕೆ ವಿಶೇಷ ಔಷಧಿ. ಸಾಮಾನ್ಯಬಗೆಯ ಅಪಸ್ಮಾರ(Epilepsy Minor)ಅಥವ ಉಗ್ರಬಗೆಯ (Epilepsy Major) ಅಪಸ್ಮಾರ ಆಗಿರಲಿ ಎಪಿಲ್‌ಕೋ ಮಾತ್ರೆಗಳು ಉತ್ತಮ ಫಲವನ್ನೀಯುವುದು. ಆಯಾ ಕೇಸಿನ ಬೆಳವಣಿಗೆಯನ್ನನುಸರಿಸಿ ಬೇಗ ಅಥವ ನಿಧಾನದಲ್ಲಿ ರೋಗ ಗುಣವಾಗುವುದು. ಈ ಔಷಧಿಯ ಸೇವನೆಯಿಂದ ಬೇರೆಯಾವ ವಿಧದ ತೊಂದರೆಯನ್ನೂ ಹುಟ್ಟಿಸುವುದಿಲ್ಲ. ಅಲ್ಲದೆ ಈ ಔಷಧಿಯಲ್ಲಿ ಅಭ್ಯಾಸ (HABIT)ವಾಗುವಂತಹ ಔಷಧಗಳಾವುವೂ ಬೆರತಿಲ್ಲ.

**ಚಿಹ್ನೆಗಳು:** ಉಗ್ರ ಅಪಸ್ಮಾರ (Epilepsy Major) ಸಾಮಾನ್ಯ ಅಪಸ್ಮಾರ (Epilepsy Minor)

**ಪ್ರಮಾಣ:** ವೇಳೆಗೆ 3 ಮಾತ್ರೆಗಳಂತೆ ದಿನಕ್ಕೆ 3 ವೇಳೆ ಸೇವಿಸಬೇಕು.

## ಹೋಮೋಸಿಲಿನ್ (ಪೆನಿಸಿಲಿನ್ ಸೋಡಿಯಂ 6×)
## (HOMOCILLIN–penicillin Sodium 6×)

[ಇಂಜೆಕ್ಷನ್ ಹಾಗೂ ಮಾತ್ರೆಗಳ ರೂಪದಲ್ಲಿ ದೊರೆಯು ವುದು.]

ಇತ್ತೀಚಿಗೆ ನಮ್ಮ ಪ್ರಯೋಗ ಶಾಲೆಯಲ್ಲಿ ಸತ್ವಗೊಳಿಸಲ್ಪಟ್ಟ ಪೆನಿಸಿಲಿನ್ ಔಷಧಿಯನ್ನು ಖುಗ್ಣ ಶಾಲೆಯ ಪರೀಕ್ಷೆ ಗೊಳಗಾಗಿಸಿದೆವು. ಅಲ್ಲಿ ನ್ಯೂಮೋನಿಯ, ಕುರು, ಗಡ್ಡೆ, ಬೆನ್ನುಪಣಿ, ನಂಜಿನ ಜ್ವರ, ಮೋಹ ರೋಗ, ಉಪದಂಶ ಹಾಗೂ ಧೀರ್ಘ ಕಾಲನದಿಂದ ಕಾಡುತ್ತಿರುವ ರೋಗಗಳಿಗೆ ಉಪಯುಕ್ತವೆಂದು ಕಂಡುಬಂದಿದೆ.

ಹೋಮಿಯೋಪತಿಯ ಪದ್ಧತಿಯ ರೀತ್ಯಾ ಸತ್ವಗೊಳಿಸಿದ ಈ ಪೆನಿಸಿಲಿನ್ ಔಷಧಿಯನ್ನು ಇತರ ಹೋಮಿಯೋಪತಿ ಔಷಧಿಗಳ ನಡುವೆ ನಿರ್ಭಯವಾಗಿ ಬಳಸಬಹುದು. ಇದರಿಂದ ಯಾವ ಕೆಡುಕೂ ಉಂಟಾಗುವುದಿಲ್ಲ, ಔಷಧಿಯನ್ನು 'ಮುರಿ'ಯುವುದಿಲ್ಲ.

**ಪ್ರಮಾಣ:** (ಇಂಜೆಕ್ಷನ್) ನೋವಿರಲಾರದು ಅಗತ್ಯವರಿತು ದಿನಕ್ಕೆ 2 ಇಂಜೆಕ್ಷನ್‌ವರೆಗೆ ಕೊಡಬಹುದು.

(ಮಾತ್ರೆಗಳು) ಒಂದುವೇಳೆಗೆ 2 ಮಾತ್ರೆಗಳಂತೆ ದಿನಕ್ಕೆ 3 ವೇಳೆಗವರೆಗೆ ಕೊಡಬಹುದು.

## ಹೋಮೋಕಾರ್ಡ್ (HOMOCORD)

**ಸಂಯೋಗ:** ಕಾಕ್ಟಸ್, ಕ್ರಿಟೇಜಸ್ ಆಕ್ಸಿ, ವಲೇರಿಯಾನ, ಕ್ಯಾಂಪರ್, ಸ್ಟ್ರೋಪಾನ್, ಐಯೋಡ್ ಆಫ್‌ಗೊಲ್ಡ್,

**ಹೋಮೋಕಾರ್ಡ್** ಈ ಕೆಳಗಿನ ಉಪದ್ರವಗಳಲ್ಲಿ ಉಪಯೋಗ ಬೀಳುತ್ತವೆ :

1. ಹೃದ್ರೋಗಕ್ಕೆ ಸಂಬಂಧಿಸಿದಂತಹ ನರ ಶೈಥಿಲ್ಯ ಚಿಹ್ನೆಗಳು.

2. ಟಾನ್ಸಿಲಿಟಿಸ್‌ಗಳಲ್ಲಿ ನಂಜಾಗುವಿಕೆ (Septic Tonsillitis) ಯಿಂದ ಹೃದಯಂ ಉಪದ್ರವಕ್ಕೊಳಗಾಗುವ ಪರಿಸ್ಥಿತಿ.

3. ಹೆಚ್ಚಿನ ಕಾಫಿ, ಟೀಯಂತಹ ಪಾನಿಯಗಳ ಸೇವನೆ ಹಾಗೂ ಮಿತಿ ಮೀರಿದ ಧೂಮಪಾನ ಸೇವನೆಯಿಂದ ಉಂಟಾಗುವ ಹೃದಯದ ಉಪದ್ರವ ಗಳು.

4. ಸ್ತ್ರೀಯರಿಗೆ ಮುಟ್ಟು ನಿಲ್ಲುವ ಸಮಯದಲ್ಲೂ ಮತ್ತು ವೃದ್ಧಾಪ್ಯದಲ್ಲೂ ಬರುವಂತಹ ಹೃದಯಕ್ಕೆ ಸಂಬಂಧಿಸಿದ ವ್ಯಾಧಿಗಳು.

5. ಯಾವುದೇ ವ್ಯಾಧಿಯಾಗಿದ್ದರೂ **ಹೃದಯ ದುರ್ಬಲ** ಗೊಂಡಿ ರುವಾಗ ಈ ಇಂಜೆಕ್ಷನ್ ಉಪಯೋಗ ಬೀಳುವುದು.

ಹೃದಯದ ಹಾರುವಿಕೆ, ಕಷ್ಟದ ಉಸಿರಾಟ, ಮೂರ್ಛೆ, ಹಾಗೂ ಅಲ್ಪ ತರದ-ತಿವ್ರ ತರದ ಹೃದಯಂ ಸೋವುಗಳಿದ್ದಾಗ ಈ ಇಂಜೆಕ್ಷನ್ನು ಆ ಚಿಹ್ನೆ ಗಳನ್ನು ನೀಗಿಸುವುದು.

**ಪ್ರಮಾಣ:** 15ತೊಟ್ಟು ಔಷಧಿಯನ್ನು ಸ್ವಲ್ಪ ನೀರಿನಲ್ಲಿ ಅಥವ ಸಕ್ಕ ರೆಯಲ್ಲಿ ಬೆರೆಸಿ ದಿನಕ್ಕೆ 3ವೇಳೆಗಳಂತೆ ಸೇವಿಸುತ್ತಾ ಬರಬೇಕು.

ಪರಿಸ್ಥಿತಿ ಉಗ್ರಾವಾಗಿದ್ದಾಗ ವೈದ್ಯರು ವೇಳೆಗೆ 25 ತೊಟ್ಟುಗಳಷ್ಟು ಸೇವಿಸಲು ಕೊಡಬಹುದು. ಆದರೆ 5ವೇಳೆಗಳಿಗಿಂತ ಹೆಚ್ಚಾಗಿ ಕೊಡ ಬಾರದು.ಔಷಧಿಯು ಚೆನ್ನಾಗಿ ಕೆಲಸಮಾಡಲು ಗ್ಲೂಕೋಸ್ ನೀರಿನಲ್ಲಿ ಔಷಧಿ ಯನ್ನು ಬೆರಸಿ ಚೆನ್ನಾಗಿ ಕಲಕಿ ಕೊಡುವುದೊಳ್ಳೆಯದು.

## ಹೋಮೋಸರ್ಪ್ (HOMOSERP)

ಹೆಚ್ಚಿನ ರಕ್ತ ಒತ್ತಡ (High Blood pressure)ಕ್ಕೆ ಈ ಮಾತ್ರೆ ಗಳು ಬಹು ಉತ್ತಮವಾದುದು. ಈ ಹೊಸ ತಯಾರಿಕೆಯಲ್ಲಿ ಹೋಮಿಯೋ ಪತಿಯ ಕೆಲವು ಔಷಧಿಗಳೊಡನೆ ರಾವಲ್ಫಿಯ ಸರ್ಪೆಂಟೀನಾ 3X ಸತ್ವದಲ್ಲಿ ಮಿಶ್ರಗೊಳಿಸಲ್ಪಟ್ಟಿರುವುದು.

ಈ ಔಷಧಕ್ಕೆ 'ಹೆಚ್ಚಿನ ರಕ್ತ ಒತ್ತಡ'ವನ್ನು ನಿಯಂತ್ರಿಸುವ ಸಾಮರ್ಥ್ಯ ವಿದೆಯೆಂದು ತಿಳಿದು ಬಂದಿದೆ. ಇದರ ಸೇವನೆಯಿಂದ ಇತರ ಕೆಡುಕುಗಳಾ ವುವೂ ಉಂಟಾಗುವುದಿಲ್ಲ.

ಈ ಮಾತ್ರೆಗಳು 'ಹೆಚ್ಚಿನ ರಕ್ತ ಒತ್ತಡದ ವ್ಯಾಧಿಗೆ ಮಾತ್ರವಲ್ಲದೆ ಹುಚ್ಚು. ಉನ್ಮಾದ, ನಿದ್ರೆ ಬಾರದಿರುವುದೇ ಮುಂತಾದ ಉಪದ್ರವಗಳಿಗೂ ಉಪಯುಕ್ತ ಬೀಳುವುದು.

**ಪ್ರಮಾಣ:** ವೇಳೆಗೆ 1 ಮಾತ್ರೆಯಂತೆ ದಿನಕ್ಕೆ 3 ಮಾತ್ರೆಗಳಂತೆ ಸೇವಿಸುತ್ತಾ ಬರಬೇಕು.

**ಲೂಸಿಟ್ಯಾಬ್ಸ್ (ಬಿಳಿ ಸೆರಗಿಗೆ ಶ್ರೇಷ್ಠ ಔಷಧಿ)**

**(LUCITABS-For specific Treatment of Leucorrhoea)**

**ಸಂಯೋಗ:** ಓವಾಟಿಸ್ಪಾ ಮರ್ಕ್ಯುರ್ ಪಲ್ಸಟಿಲ್ಲ ಅಲೂಮೆನ ಇತ್ಯಾದಿ.

**ಲೂಸಿಟ್ಯಾಬ್ಸ್:** ಮಾತ್ರೆಗಳಲ್ಲಿ ಹೋಮಿಯೋಪತಿಯ ಮುಖ್ಯ ಔಷಧಿಗಳೊಡನೆ ಓವಾಟೆಸ್ಪಾ ಎಂಬ ವಿಶೇಷ ಔಷಧವೂ ಬೆರತಿದೆ.

**ಲೂಸಿಟ್ಯಾಬ್ಸ್:** ಮಾತ್ರೆಗಳು ಎಲ್ಲಾ ಬಗೆಯ ಬಿಳಿ ಸೆರಗಿಗೂ ಉಪಯೋಗ ಬೀಳುವುದು. ಧೀರ್ಘಕಾಲದ್ದಿರಲಿ ಅಲ್ಪ ಕಾಲದ್ದಿರಲಿ ಬಿಳುಪು ಯಾವುದೇ ಬಣ್ಣದಿಂದ ಕೂಡಿರಲಿ ಹಾಗೂ ಖಾರವಿರಲಿ ಇಲ್ಲದಿರಲಿ ಈ ಮಾತ್ರೆಗಳು ಆ ಉಪದ್ರವನ್ನು ತಪ್ಪದೆ ನೀಗಿಸುವುದು.

ದೀರ್ಘಕಾಲೀನ ವ್ಯಾಧಿಯುಲ್ಲಿ 3ರಿಂದ 6ಶೀಶೆಯುವರೆಗೆ ಬಳಸಬೇಕಾಗಿ ಬರಹುದು.

**ಪ್ರಮಾಣ:** ವೇಳೆಗೆ 1 ಮಾತ್ರೆಯಂತೆ ದಿನಕ್ಕೆ 3 ವೇಳೆಗಳಂತೆ ಊಟಕ್ಕೆಒಂದು ಘಂಟೆ ಮೊದಲು ಸೇವಿಸಬೇಕು.

ಮೆನರೆಗ್ (ಮುಟ್ಟಿನ ದೊಷಗಳನ್ನು ಸರಿತಿದ್ದುವುದು)

**(MENAREG– the great Menstrual regulator)**

**ಸಂಯೋಗ:** ಕಾಲಿಸಲ್ಫ್, ಮೆಗ್ನೀಷಿಯು ಫಾಸ್, ಕೋಲೋ ಸಿಂಘ್ ಸಬೀನ, ಪಲ್ಸಟಿಲ್ಲ ಇತ್ಯಾದಿ.

ಕ್ರಮರ ಹಿತ ಮುಟ್ಟಿನ ಉಪದ್ರವಕ್ಕೆ ಮುಖ್ಯವಾಗಿ ಪೀಡಿತಾರ್ತವ (Dysmenorrhoea)ಕ್ಕೆ ಇದಕ್ಕಿಂತಲೂ ಶ್ರೇಷ್ಠ ಔಷಧಿ ಇಲ್ಲವೆನ್ನ ಬೇಕು. ಈ ಮಾತ್ರೆಗಳನ್ನು ಸೋದರಿ (Sodhari)ಎಂಬ ಔಷಧಿಯೊಡನೆ ಬದಲಿಸಿ ತೆಗೆದು ಕೊಳ್ಳುತ್ತ ಬರುವುದು ಉತ್ತಮ.

ಪ್ರಮಾಣ: ಉಪದ್ರವ ಉಗ್ರವಿದ್ದಾಗ ಪ್ರತಿ 2ಘಂಟೆಗೊಮ್ಮೆಯಂತೆ 1ಮಾತ್ರೆಯಂತೆ ಬಿಸಿ ನೀರಿನಲ್ಲಿ ತೆಗೆದುಕೊಳ್ಳುತ್ತಾ ಬರುವುದು. ಉಪದ್ರವ ಪೂರ್ಣವಾಗಿ ಗುಣಗೊಳ್ಳಲು ದಿನಕ್ಕೆ 3 ವೇಳೆಗಳಂತೆ ವೇಳೆಗೆ 1 ಮಾತ್ರೆಯಂತೆ ಕ್ರಮವಾಗಿ ಸೇವಿಸುತ್ತ ಬರಬೇಕು. ಮಾತ್ರೆಗಳನ್ನು ಊಟಕ್ಕೆ 1 ಗಂಟೆಯ ಮುನ್ನ ಅಥವ ಅನಂತರ ಬಿಸಿನೀರಿನಲ್ಲಿ ಸೇವಿಸಬೇಕು.

ಪೈಲೆಟ್ (ಮೂಲಕ್ಕೆ ಮುಖ್ಯ ಔಷಧಿ)

(PYLET-Spicific Treatment for piles)

ಸಂಯೋಗ: ಕಲ್ಕ್. ಸಲ್ಫ್,ಕಾಲಿಮ್ಯೂರ್, ಕಾಲಿಸಲ್ಫ್, ಪಿಯೋನಿಯ ಹಮಾಮೆಲಿಸ್ ಇತ್ಯಾದಿ.

ರಕ್ತ ಕಾರುವ ಮೂಲ, ಹೊರಮೂಲ ಒಳಮೂಲ ಭಗಂದರ ವ್ಯಾಧಿ ಗಳುಸಾಮಾನ್ಯವಾಗಿ ಔಷಧಿಗೆ ಬಾಗುವುದಿಲ್ಲ ಅಲ್ಲದೆ ಅವು ಬಹು ವೇದನೆ ಯನ್ನುಂಟುಮಾಡುವುದು.

ಪೈಲೆಟ್ ಔಷಧಿಯು ಹೋಮಿಯೋಪತಿಹಾಗೂ ಬಯೋ ಕೆಮಿಸ್ಟ್ರಿಯ ಲವಣಗಳ ಮಿಶ್ರ ತಯಾರಿಕೆಯಿಂದ ರೂಪಿತವಾದ ವಿಶೇಷ ಔಷಧ. ಇದರ ಕ್ರಮವಾದ ಸೇವನೆಯಿಂದ ನಿಮ್ಮನ್ನು ನಿಶ್ಚಯವಾಗಿಯು ಶಸ್ತ್ರಚಿಕಿತ್ಸೆಯಿಂದ ತಪ್ಪಿಸುವುದು.

ಪ್ರಮಾಣ: ವೇಳೆಗೆ 1ಮಾತ್ರೆಯಂತೆ ದಿನಕ್ಕೆ 3ವೇಳೆಗಳಂತೆ ಸೇವಿಸುತಾ ಬರಬೇಕು.

ಸಾನಿಕೋ (ಹುಚ್ಚಿಗೆ ಸಿದ್ಧೌಷಧ)

SANICO-Specific for Insanity)

ಸಂಯೋಗ: ಬೆಲ್ಲಡೋನ ಹಯಾಸ್ಯಾಮಸ್ ಲಕೇಸಿಸ್, ಅನಕಾ ರ್ಡಿಯಂ, ರಾವೊಲ್ಫಿಯ ಸರ್ಪ್ ಇತ್ಯಾದಿ.

**ಸಾನಿಕೋ:** ಶುದ್ಧಿ ಹೋಮಿಯೋಪತಿ ರೀತ್ಯ ತಯಾರಿಸಿದ ವಿಶೇಷ ತಯಾರಿಕೆ. ಈ ಮಾತ್ರೆಗಳು ಎಲ್ಲಾ ಬಗೆಯ ಹುಚ್ಚಿಗೂ ಉಪಯುಕ್ತ ಬೀಳುವುದು.

**ಸೂಚನೆ:** ಸಾನಿಕೋ ಕೊಡುತ್ತಿರುವಾಗ ಇದರೊಡನೆ ಟೆರಿಕೋ ಎಂಬ ಬೇರೊಂದು ಔಷಧಿಯನ್ನು ಬದಲಿಸಿ ಕೊಡುತ್ತ ಬಂದರೆ ತ್ವರೆಯಲ್ಲಿಯೇ ಉತ್ತಮ ಫಲ ದೊರೆಯುವುದು.

**ಪ್ರಮಾಣ:** ವೇಳೆಗೆ ಎರಡು ಮಾತ್ರೆಗಳಂತೆ ದಿನಕ್ಕೆ ಮೂರು ವೇಳೆಗಳಂತೆ ಕೊಡುತ್ತ ಬರಬೇಕು ಉಪದ್ರವವು ಉಲ್ಬಣ ಗೊಂಡಿರುವಾಗ ಔಷಧಿಯ ಪ್ರಮಾಣವನ್ನು ಎರಡರಷ್ಟು ಮಾಡಿಕೊಳ್ಳಬಹುದು. ದಿನಕ್ಕೆ 6ವೇಳೆಗಷ್ಟು ಔಷಧಿಗಳನ್ನು ಕೊಡಬಹುದು.

## ಸೋದರಿ (SODHARI)

**ಸಂಯೋಗ:** ಅಲೆಟ್ರಿಸ್ ಫಾರಿನೋಸಾ, ಹೆಲೋನಿಯಾಸ್, ಅಶೋಕ ವೈಬರ್ನಂಪಿ, ಅಕ್ವಿಯಾರಸಿ, ಪಲ್ಸಟಿಲ್ಲ ಲಾಸೋನ್ ಇತ್ಯಾದಿ.

**ಸೋದರಿ** ಎಂಬ ಔಷಧಿಯನ್ನು ಸಸ್ಯವರ್ಗದಲ್ಲಿಯ ಅಪರೂಪವಾಗುಳ್ಳ ಔಷಧಿಗಳನ್ನು ಕಲೆಹಾಕಿ ಹೋಮಿಯೋಪತಿಯ ಫಾರ್ಮ ಕೋಪಿಯ ಮೇರೆಗೆ ತಯಾರಿಸಲಾಗಿದೆ. ಈ ಔಷಧವು ಕ್ಷೀಣಾವರ್ತವ (Amenorrhoea) ಅಧಿಕಾರ್ತನ (Dysmenorrhoea) ಹಾಗೂ ಪೀಡಿತಾರ್ತವ (Menorrhogia)ಕ್ಕೆ ಉಪಯೋಗ ಬೀಳುವುದು. ಅಲ್ಲದೆ ಬಿಳಿಸೆರಗಿಗೂ (Luvcorrhoea) ಉಪಯುಕ್ತ ಬೀಳುವುದು ಫಲವು ತಪ್ಪದೆ ಹಾಗೂ ತ್ವರೆಯಲ್ಲೆ ದೊರೆಯುವುದಲ್ಲದೆ ನಿರಂತರದ್ದಾಗಿಯೂ ಇರುವುದು.

**ಸೋದರಿಯನ್ನು** 3ನೇ ಅಥವ 4ನೇ ತಿಂಗಳಲ್ಲಿ ಗರ್ಭಪಾತವಾಗುತ್ತಿರುವವರಿಗೆ ಮೊದಲೆ ಕೊಡುವುದರಿಂದ ಆ ಉಪದ್ರುವವನ್ನು ತಡೆಯುವುದು. ಈ ಔಷಧಿಯ ಕ್ರಮವಾದ ಸೇವನೆಯಿಂದ ಸ್ತ್ರೀಯರ ಜನನೇಂದ್ರಿಯಗಳನ್ನು ಸಶಕ್ತಗೊಳಿಸುವುದು ಅಲ್ಲದೆ ಸೇವಿಸಿದ ಆಹಾರವನ್ನು ಮೈಗೆ ಹತ್ತುವಂತೆಯೂ ಮಾಡುವುದು.

ಈ ಔಷಧಿಯನ್ನು ಸೇವಿಸುವಾಗ ಕಠಿಣ ಪಥ್ಯ ಇರಬೇಕಾಗಿಲ್ಲ.

**ಪ್ರಮಾಣ:** ಉಪದ್ರವವು ಉಲ್ಬಣವಾಗಿರುವಾಗ ಪ್ರತಿ ಅರ್ಧ ಘಂಟೆಗೊಮ್ಮೆಯಂತೆ ಅರ್ಧ ಔನ್ಸ್ ನೀರಿನಲ್ಲಿ 8ತೊಟ್ಟುಗಳಷ್ಟು ಬೆರಸಿ ಸೇವಿಸ ಬೇಕು. ದಿನಕ್ಕೆ 6ವೇಳೆಗಳವರೆಗೆ ಸೇವಿಸ ಬಹುದು ಉಳಿದ ಸಮಯ ಗಳಲ್ಲಿ ದಿನಕ್ಕೆ 3ವೇಳೆಯೇ ಸಾಕು. ಊಟಕ್ಕೆ ಅರ್ಧಘಂಟೆ ಮೊದಲು ಸೇವಿಸ ಬೇಕು.

**ಸೂಚನೆ:** ಸೋದರಿಯನ್ನು ಬರಿ ಹೊಟ್ಟೆಯಲ್ಲಿ ಸೇವಿಸುವುದೇ ಸೂಕ್ತ,

## ಸುಬಾ (SUBA)

ಬಾಯಿಯ ಮೂಲಕ ಸೇವಿಸುವಂತಹ ಹೋಮಿಯೋಪತಿಯ ಗರ್ಭ ನಿಯಂತ್ರಣ ಔಷಧ.

**ಸಂಯೋಗ:** ಮರ್ಕುರಿಯಾಸ್, ನೇಟ್ರಂಮ್ಯೂರ್, ಬೋರಾಕ್ಸ್, ಕ್ಲಾವಿಸಿಪ್ಸ್ ಪರ್ಪುರಾ, ಅಪಿಸ್‌ಮೆಲ್ ಇತ್ಯಾದಿ.

ಸುಬಾ ಮಾತ್ರೆಗಳು ನಿರಪಾಯವುಳ್ಳವು. ಗರ್ಭವಾಗದಂತೆ ದಕ್ಷತೆ ಯಿಂದ ತಡೆಯುವುದು. ಬಹು ಸುರಕ್ಷಿತವಾದುದು, ಒಂದು ತಿಂಗಳ ಪರ್ಯಂತರ ಗರ್ಭವಾಗದಂತೆ ತಡೆಯುವುದು.

ಸುಬಾ ಮಾತ್ರೆಗಳನ್ನು ತಿಂಗಳ ಗಟ್ಟಲೆ ಉಪಯೋಗಿಸುತ್ತ ಬಂದರೂ ಯಾವುದೊಂದು ಕೆಡುಕನ್ನೂ ಉಂಟು ಮಾಡುವುದಿಲ್ಲ. ಮಗು ಬೇಕಾಗಿರು ವಾಗ ಆ ತಿಂಗಳು ಔಷಧಿಯನ್ನು ಸೇವಿಸದಿದ್ದರಾಯಿತು.

**ಪ್ರಮಾಣ:** ಸುಬಾ ಮಾತ್ರೆಗಳು 10ಗ್ರೈಯಿನ್ ಪ್ರಮಾಣದ ಮಾತ್ರೆ ಗಳ ರೂಪದಲ್ಲಿರುವುದು. ಒಂದು ವೇಳೆಗೆ 1ಮಾತ್ರೆಯಂತೆ ಬೆಳಗ್ಗೆ ಹಾಗೂ ಸಂಜೆ ದಿನಕ್ಕೆ ಎರಡು ವೇಳೆಯಂತೆ .ಸ್ತ್ರೀಯರು ಸೇವಿಸುತ್ತ ಬರ ಬೇಕು. ಈ ಮಾತ್ರೆಯನ್ನು ಮುಟ್ಟು ಕಾಣಿಸಿಕೊಂಡ ನಾಲ್ಕನೆಯ ದಿನದಿಂದ ಮೂರು ದಿನಗಳವರೆಗೆ ಅಂದರೆ 4, 5, 6,ನೇದಿನದವರೆಗೆ ಕ್ರಮವಾಗಿ ಕೊಡುತ್ತ ಬರಬೇಕು. ಇದರಿಂದ ಮುಂದಿನ ತಿಂಗಳು ಗರ್ಭ ಧರಿಸುವುದನ್ನು

ತಡೆಯುವುದು. ಔಷಧಿ ಸೇವಿಸುವ ಮೂರು ದಿವಸಗಳವರೆಗೆ ಸಂಭೋಗ ವನ್ನು ನಿಷೇಧಿಸಬೇಕು.

## ಟೆರಿಕೋ (TERICO)

**ಸಂಯೋಗ :** ಕಾಸ್ಟೋರಿಯಂ, ಪೋಸ್ಟಸ್, ಪೋಥೋಸ್ ಪೋ, ಪ್ಲಾಟೀನಾ, ವಲೇರಿಯಾನಾ, ಇಗ್ನೇಷಿಯಾ, ಅಸಪೋಟಿಡಾ, ಸಾಂಬಂಗ್,

ಹೋಮಿಯೋಪತಿಯ ಪದ್ಧತಿಯ ಪ್ರಕಾರ ತಯಾರಿಸಿದ–ಬಹೋಲ ಬ್ರಾಂಡಿನ ವಿಶೇಷ ತಯಾರಿಕೆಯಾದ **ಟೆರಿಕೋ,** ಎಲ್ಲಾ ಬಗೆಯ ಉನ್ಮಾದಕ್ಕೂ, ನರಶೂಲೆಗೂ, ಭ್ರಾಂತಿಗೂ ಉಪಯುಕ್ತ ಬೀಳುವುದು. ತ್ವರಿತ ಗುಣವೀಯುವುದು.

**ಪ್ರಮಾಣ :** ವೇಳೆಗೆ 2 ಮಾತ್ರೆಗಳಂತೆ ದಿನಕ್ಕೆ 3 ವೇಳೆಗಳು ಸೇವಿಸುತ್ತ ಬರಬೇಕು. ಉನ್ಮಾದ ಉಗ್ರವಿದ್ದಾಗ 6 ವೇಳೆಗಳವರೆಗೆ ಸೇವಿಸ ಬಹುದು.

## ಎಟ್ರಂ (ವಿಶೇಷ ಶಕ್ತಿಗೂ ವೀರ್ಯ ವೃದ್ಧಿಗೂ ಶ್ರೇಷ್ಠ) (YTRUM–For vigour & vitality)

**ಸಂಯೋಗ :** ಟ್ರಿಬುಲಸ್ ಟೆರ್ರೆಸ್, ಸಿಂಚ್, ಸಾಲಿಕ್ಸ್, ಅನಕಾರ್ಡಿಯಂ, ಅವೆನಾಸಟ್, ಸೆಲೀನಿಯಂ. ಲೈಕೋ ಪೋಡಿಯಂ.

ಆಧುನಿಕ ಯುಗದ ಅಪೂರ್ವ ಔಷಧ–ಎಟ್ರಂ, ಲೈಂಗಿಕ ವಿಜ್ಞಾನಿಗಳ ಅವಿರಾಮ ದುಡಿಮೆಯಿಂದ ಹೊರಬಿದ್ದ ಅಮೂಲ್ಯ ಮಾತ್ರೆಗಳಿವು.

ಎಳೆತನದಲ್ಲೇ ಹೆಜ್ಜೆ ತಪ್ಪಿದ ನಡತೆ, ಅಸ್ವಾಭಾವಿಕ ಕಾಮ ತೃಷೆ, ಅದರ ದುಷ್ಪರಿಣಾಮಗಳು, ಬದುಕಿನಲ್ಲಿ ನಿರಾಶೆ, ರಾತ್ರೆ ನಿದ್ರೆ ಇಲ್ಲದಿರುವಿಕೆ. ಸ್ವಪ್ನ ಸ್ಖಲನ, ಇತ್ಯಾದಿ ಉಪದ್ರವಕ್ಕೊಳಗಾಗಿ ನರಳುತ್ತಿರುವವರಿಗೆ ಎಟ್ರಂ ಒಂದು ಸಂಜೀವಿನಿ, ಸೊರಗಿದ, ಕೃಶಗೊಂಡ, ಸಾಕಾದಷ್ಟು ಬೆಳವಣಿಗೆ ಇರದ ಇಂದ್ರಿಯಗಳನ್ನು ಸರಿ ತಿದ್ದುವುದು. ಸ್ವಪ್ನ ಸ್ಖಲನಗಳನ್ನು ನಿಲ್ಲಿಸಿ ಬದುಕಿ

ಗೊಂದು ಬೆಳಕನ್ನೀಯುವುದು ನಿಮ್ಮನ್ನು ನೂತನ ವ್ಯಕ್ತಿಯನ್ನಾಗಿ ಮಾಡು ವುದು; ನಿಮಗೆ ನವ ಬಾಳನ್ನೀಯುವುದು.

ತರುಣರು ವೃದ್ಧರೂ ಇದನ್ನು ಬಳಸಬಹುದು.

ಪ್ರಮಾಣ : ಒಂದರಿಂದ ಎರಡು ಮಾತ್ರೆಗಳಂತೆ ವೇಳೆಯೊಂದಕ್ಕೆ ಸೇವಿಸಬೇಕು. ದಿನಕ್ಕೆ 3 ವೇಳೆಗಳಂತೆ ಆಹಾರದ ನಂತರ ಕೊಡಬೇಕು.

## ಎಟ್ರಂ–ಇ (ಸೆಟೆಬೇನೆ ಮತ್ತು ಎಳವು)
## (YTRUM–E-An Ideal Specific For Spasms & Convulsions)

ಸಂಯೋಗ : ಕಾಲಿಫಾಸ್, ಅಬಿಸಿಂಥ್, ಹೈಡ್ರೋಸಿ, ಹಯಸ್ಯಾ ಮಸ್, ಕಾಲಿ ಬ್ರೋಮೈಡ್, ಓನಾಂಥ, ಸ್ಟ್ರಮೋನಿಯಂ ಇತ್ಯಾದಿ

ಎಟ್ರಂ–'ಇ' ಮಾತ್ರೆಗಳು ಎಲ್ಲಾ ಬಗೆಯ ಸೆಟೆಬೇನೆ ಹಾಗೂ ಎಳವು ಗಳಿಗೆ ಶ್ರೇಷ್ಠವಾದುದು. ಉನ್ಮಾದ ಹಾಗೂ ಬುದ್ಧಿ ವೈಕಲ್ಯ, ನರಗಳ ದೌರ್ಬಲ್ಯಕ್ಕೆ ಬಹು ಉಪಯುಕ್ತವುಳ್ಳದ್ದು.

ಪ್ರಮಾಣ : ವೇಳೆಗೆ 1 ಮಾತ್ರೆಯಂತೆ ದಿನಕ್ಕೆ 5 ವೇಳೆಯಂತೆ ಊಟಕ್ಕೆ ಮೊದಲು ಸೇವಿಸುತ್ತಾ ಬರಬೇಕು.




## ಬಹೋಲ

## ಬಯೋ-ಕಾಂಪ್ಲೆಕ್ಸ್ ಮಾತ್ರೆಗಳು
## (Bahola Bio-Complex Tablets)

ಡಾ|| ಶೂಪ್ಲರ್‌ರವರ ಕ್ಷಾರವು ಸಂಯೋಗ ರೂಪದಲ್ಲಿ ಅತ್ಯುತ್ತಮವಾಗಿ ಕೆಲಸ ಮಾಡುವುದೆಂದು ಸ್ಪಷ್ಟವಾಗಿ ತಿಳಿದುಬಂದಿದೆ. ಈ ಸಮ್ಮಿಶ್ರ ಮಾತ್ರೆಗಳನ್ನು ಸುಲಭವಾಗಿ ಕೊಡಬಹುದು. ಅಲ್ಲದೆ ಇವು ನಿರಪಾಯವುಳ್ಳವು.

ಈಗಾಗಲೇ ಮಾರುಕಟ್ಟೆಯಲ್ಲಿ ಈ ಬಗೆಯ ಸಮ್ಮಿಶ್ರಗಳು ದೊರೆಯಬಹುದು. ಆದರೆ 'ಬಹೋಲ' ತಯಾರಿಕೆಯಲ್ಲಿ ಒಂದು ವಿಶೇಷತೆ ಇದೆ. ಅದರ ಔಷದಿ ತಯಾರಿಕೆಯಲ್ಲಿ ತನ್ನದೇ ಆದ ವಿಶಿಷ್ಟಸ್ಥಾನ ಪಡೆದಿದೆ. ಅದು ತಯಾರಿಸಿದ ಕ್ಷಾರ ಸಮ್ಮಿಶ್ರಣದ ಬಗ್ಗೆ ಎರಡು ದಶಕಗಳವರೆಗೆ ಅನೇಕ ಮಂದಿ ಉಪಯೋಗಿಸಿ ಅದರ ದಕ್ಷ ಕಾರ್ಯ ನಿರ್ವಹಣೆಗೆ ತಲೆದೂಗಿದ್ದಾರೆ.

ಬಹೋಲ ಬಯೋ ಕಾಂಪ್ಲೆಕ್ಸ್ ಮಾತ್ರೆಗಳು ಬರೀ ಸತ್ವಗೊಳಿಸಲ್ಪಟ್ಟ ಮಿಶ್ರಣಗಳಲ್ಲ. ಆ ನಿಯೋಜಿತ ಕ್ಷಾರಗಳನ್ನು ಸಂಯೋಜನೆಗೊಳಗಾಗಿಸಿದ ನಂತರ 4× ಸತ್ವದಲ್ಲಿ ಸತ್ವಗೊಳಿಸಲಾಗುವುದು. ಈ ಸತ್ವದಲ್ಲಿ ಔಷದಿ ಬಹು ಚೆನ್ನಾಗಿ ಕೆಲಸ ಮಾಡುವುದೆಂದು ಅನುಭವದಿಂದ ಕಂಡುಕೊಳ್ಳಲಾಗಿದೆ.

## 1 ಅರಕ್ತತೆ (ANAEMIA)

ಸಂಯೋಗ: ಫೆರಂಪಾಸ್, ಕಲ್ಕೆರಿಯಾಫಾಸ್, ನೇಟ್ರಂಮ್ಯೂರ್, ಕಾಲಿ ಮ್ಯೂರ್

ಚಿಹ್ನೆಗಳು; ಅಯುಕ್ತ ಆಹಾರ. ಸತ್ವರಹಿತ ಆಹಾರ, ಕೆಂಪು ಕರ್ತ ಕಣಗಳ ಕೊರತೆ ಎಡೆಬಿಡದೆ ರಕ್ತಸ್ರಾವ. ಉದಾಹರಣೆಗೆ ಗ್ಯಾಸ್ಟ್ರಿಕ್ ಹಾಗೂ ಡುಯೋಡಿನಲ್ ವ್ರಣಗಳು. ರಕ್ತಸ್ರಾವ ಇತ್ಯಾದಿ.

ಪ್ರಮಾಣ; ಹಿರಿಯರಿಗೆ ವೇಳೆಗೆ 4 ಮಾತ್ರೆಗಳು ಮಕ್ಕಳಿಗೆ 2 ಮಾತ್ರೆಗಳು, ದಿನಕ್ಕೆ 4 ವೇಳೆಯಂತೆ ಕೊಡಬೇಕು.

## 2 ಗೂರಲು (ASTHMA)

ಸಂಯೋಗ: ಕಾಲಿಪಾಸ್, ಮೆಗ್ನೀಷಿಯಾಫಾಸ್, ನೇಟ್ರಂಮ್ಯೂರ್ ನೇಟ್ರಂ ಸಲ್ಫ್.

ಚಿಹ್ನೆಗಳು : ಉಬ್ಬಸ,ಉಸಿರಿಗಾಗಿ ಚಡಪಡಿಸುವುದು, ಎದೆಯಲ್ಲಿ ಕಫ ಸಂತ್ತಿಕೊಂಡು ಬಹು ಒದ್ದಾಡುವರು, ಮೇಲಿಂದ ಮೇಲೆ ಬರುವ ಕೆಮ್ಮು, ರೋಗಿ ಸಂಜೆಯಲ್ಲೂ, ರಾತ್ರೆಯಲ್ಲೂ ಬಹು ಅವಸ್ಥೆ ಪಡುವರು. ತಣ್ಣನೆ ಗಾಳಿಗಾಗಿ ಹಂಬಲಿಸುವರು.

ಪ್ರಮಾಣ: ಹಿರಿಯರಿಗೆ ವೇಳೆಗೆ 4 ಮಾತ್ರೆಗಳು. ಮಕ್ಕಳಿಗೆ 2 ಮಾತ್ರೆಗಳು. ದಿನಕ್ಕೆ 4 ವೇಳೆಗಳಂತೆ ಕೊಡಬೇಕು.

## 3 ಹೊಟ್ಟೆ ಶೂಲೆ (COLIC)

ಸಂಯೋಗ: ಮೆಗ್ನೀಷಿಯಂ ಫಾಸ್, ಕಲ್ಕೆರಿಯಾಪಾಸ್, ನೇಟ್ರಂಸಲ್ಫ್, ಫೆರಂಪಾಸ್.

ಚಿಹ್ನೆಗಳು : ಮುಖ್ಯವಾಗಿ ಮಕ್ಕಳಿಗೆ ಹಲ್ಲು ಬರುವಾಗ ಉಂಟಾಗುವ ಹೊಟ್ಟೆ ಶೂಲೆಗೆ ಹಾಗೂ ಹಿರಿಯರಿಗೆ ಹೊಟ್ಟೆಯಲ್ಲಿ ಗಾಳಿ ಸೇರಿ ಬರುವಂತಹ

**ಹೊಟ್ಟೆ ನೋವು.** ಮಲಬದ್ಧತೆಯ ಕಾರಣವಾಗಿ ಬರುವ ಹೊಟ್ಟೆನೋವಿಗೂ ಉಪಯುಕ್ತವುಳ್ಳದ್ದು.

**ಪ್ರಮಾಣ :** ಹಿರಿಯರಿಗೆ ವೇಳೆಗೆ 4 ಮಾತ್ರೆಗಳು. ಕಿರಿಯರಿಗೆ 2 ಮಾತ್ರೆಗಳು. ದಿನಕ್ಕೆ 4 ವೇಳೆಗಳಂತೆ ಕೊಡಬೇಕು.

## 4. ಮಲಬದ್ಧತೆ (CONSTIPATION)

**ಸಂಯೋಗ :** ಕಲ್ಕೇರಿಯ ಫ್ಲೋರ್, ಕಾಲಿಮ್ಯೂರ್, ಸಿಲೀಷಿಯ, ನೇಟ್ರಂ ಮ್ಯೂರ್.

**ಚಿಹ್ನೆಗಳು :** ತಲೆ ನೋವು, ಬಾಯಲ್ಲಿ ದುರ್ವಾಸನೆ, ಕೆಟ್ಟ ರುಚಿ. ಒಣಗಿದ ನಾಲಿಗೆ ಇವುಗಳಿಂದೊಡಗೂಡಿದ ಮಲಬದ್ಧತೆಗೆ ಶ್ರೇಷ್ಠವಾದುದು.

**ಪ್ರಮಾಣ :** ಹಿರಿಯರಿಗೆ ವೇಳೆಗೆ 4 ಮಾತ್ರೆಗಳು ಕಿರಿಯರಿಗೆ ಎರಡು ಮಾತ್ರೆಗಳು. ದಿನಕ್ಕೆ 4 ವೇಳೆಗಳಂತೆ ಕೊಡುತ್ತಾ ಬರಬೇಕು.

## 5. ನೆಗಡಿ ಮತ್ತು ಶೀತ (CORYZA & COLD)

**ಸಂಯೋಗ :** ಫೆರಂಫಾಸ್, ಕಾಲಿಮ್ಯೂರ್, ಕಾಲಿಸಲ್ಫ್, ನೇಟ್ರಂ ಮ್ಯೂರ್.

**ಚಿಹ್ನೆಗಳು ;** ಶ್ವಾಸಕೋಶದ ಶ್ಲೇಷ್ಮ ತ್ವಚೆಯಲ್ಲಿ ಉರಿಯೂತ, ತಲೆ ಬಾರ, ಸೀನುಗಳು, ಮೂಗಿನಿಂದ ನೀರು ಸುರಿಯುವುದು, ಚಳಿ ಚಳಿ, ಮೂಗಿನಿಂದ ಉಸಿರಾಡಲು ಕಷ್ಟ.

**ಪ್ರಮಾಣ :** ಹಿರಿಯರಿಗೆ ವೇಳೆಗೆ 4 ಮಾತ್ರೆಗಳು. ಕಿರಿಯರಿಗೆ ಎರಡು ಮಾತ್ರೆಗಳು. ದಿನಕ್ಕೆ 4 ವೇಳೆಗಳಂತೆ ಕೊಡಬೇಕು.

## 6. ಕೆಮ್ಮು (COUGH)

**ಸಂಯೋಗ :** ಫೆರಂಫಾಸ್, ಕಾಲಿಮ್ಯೂರ್, ಕಾಲಿಸಲ್ಫ್, ನೇಟ್ರಂ ಮ್ಯೂರ್, ಮೆಗ್ನೀಷಿಯ ಫಾಸ್.

ಚಿಹ್ನೆಗಳು : ತಲೆಬಾರ, ಎದೆಯಲ್ಲಿ ಬಿಗಿತ, ಒಣಕೆಮ್ಮು, ಅಥವ ಕಫ ಕೆಮ್ಮು, ಅಲ್ಪ ಪ್ರಮಾಣದಲ್ಲಿ ಕಫ ಇಲ್ಲವೇ ಹೆಚ್ಚಿನ ಪ್ರಮಾಣದಲ್ಲಿ ಕಫ ಹೊರಬರುವುದು. ಬ್ರಾಂಕೈಟೀಸ್. ಉಸಿರಾಟ ಕಷ್ಟವಾಗುವುದು.

ಪ್ರಮಾಣ : ಹಿರಿಯರಿಗೆ ವೇಳೆಗೆ 4 ಮಾತ್ರೆಗಳು. ಕಿರಿಯರಿಗೆ ಎರಡು ಮಾತ್ರೆಗಳು. ದಿನಕ್ಕೆ 4 ವೇಳೆಗಳಂತೆ ಕೊಡುತ್ತಾ ಬರಬೇಕು.

## 7. ಮಧುಮೇಹ (DIABETES)

ಸಂಯೋಗ ; ಕಲ್ಕೇರಿಯ ಫಾಸ್, ಫೆರಂಫಾಸ್, ಕಾಲಿಫಾಸ್, ಮೆಗ್ನೀಷಿಯಂ ಫಾಸ್, ನೇಟ್ರಂ ಫಾಸ್, ನೇಟ್ರಂ ಸಲ್ಫ್.

ಚಿಹ್ನೆಗಳು : ಎಡೆಬಿಡದ ದಾಹ, ಮೂತ್ರದ ಪ್ರಮಾಣ ಹೆಚ್ಚಿರುವುದು, ದೇಹ ಕೃಶಗೊಳ್ಳುವುದು, ನರಗಳ ದೌರ್ಬಲ್ಯ, ನಾಲಿಗೆ ಒಣಗಿ ಕೆಂಪಾಗಿರುವುದು. ನಾಡಿ ವೇಗವಾಗಿ ಬಡಿದುಕೊಳ್ಳುವುದು, ಮಲಬದ್ಧತೆ, ಕಾಲುಗಳಲ್ಲಿ ನೋವು.

ಪ್ರಮಾಣ : ಹಿರಿಯರಿಗೆ ವೇಳೆಗೆ 4 ಮಾತ್ರೆಗಳು. ಕಿರಿಯರಿಗೆ ಎರಡು ಮಾತ್ರೆಗಳು. ದಿನಕ್ಕೆ 4 ವೇಳೆಗಳಂತೆ ಕೊಡುತ್ತ ಬರಬೇಕು.

## 8. ಭೇದಿ (LIARRHOEA)

ಸಂಯೋಗ : ಕಲ್ಕೇರಿಯ ಫಾಸ್, ಫೆರಂಫಾಸ್, ಕಾಲಿಫಾಸ್, ಕಾಲಿ ಸಲ್ಫ್, ನೇಟ್ರಂ ಸಲ್ಫ್.

ಚಿಹ್ನೆಗಳು : ಆಹಾರ ದೋಷದಿಂದ ಅಥವ ಹೆಚ್ಚಿನ ಆಹಾರ ಸೇವನೆಯಿಂದ ಉಂಟಾದ ಭೇದಿ. ಹೊಟ್ಟೆ ನೋವು, ಹೊಟ್ಟೆಯಲ್ಲಿ ವಾಯು ತುಂಬಿಕೊಂಡಂತಹ ಭಾವನೆ.

ಪ್ರಮಾಣ : ಹಿರಿಯರಿಗೆ ವೇಳೆಗೆ 4 ಮಾತ್ರೆಗಳು. ಕಿರಿಯರಿಗೆ ಎರಡು. ಮಾತ್ರೆಗಳು. ದಿನಕ್ಕೆ 4 ವೇಳೆಗಳಂತೆ ಕೊಡಬೇಕು.

## 9. ಆಮಶಂಕೆ (DYSENTERY)

**ಸಂಯೋಗ :** ಫೆರಂಫಾಸ್, ಕಾಲಿಫಾಸ್, ಕಾಲಿಮ್ಯೂರ್, ಮೆಗ್ನೀಷಿಯಂ ಫಾಸ್.

**ಚಿಹ್ನೆಗಳು :** ಅಡಿಗಡಿಗೆ ಸ್ವಲ್ಪ ಸ್ವಲ್ಪ ಮಲವಿಸರ್ಜಿಸುವುದು, ಮಲದಲ್ಲಿ ಆಮವೂ ರಕ್ತವೂ ಬೆರತು ಹೋಗುವುದು, ಹೊಟ್ಟೆ ಶೂಲೆ, ಅಡಿಗಡಿಗೆ ಮಲವಿಸರ್ಜಿಸಬೇಕೆಂಬ ಇಚ್ಛೆ.

**ಪ್ರಮಾಣ :** ಹಿರಿಯರಿಗೆ ವೇಳೆಗೆ 4 ಮಾತ್ರೆಗಳು. ಕಿರಿಯರಿಗೆ ಎರಡು ಮಾತ್ರೆಗಳು. ದಿನಕ್ಕೆ 4 ವೇಳೆಗಳಂತೆ ಕೊಡುತ್ತ ಬರಬೇಕು.

## 10. ಟಾನ್ಸಿಲಿಟೀಸ್ (ENLARGED TONSILS)

**ಸಂಯೋಗ :** ಕಾಲ್ಕೇರಿಯ ಫಾಸ್, ಕಾಲಿಮ್ಯೂರ್, ಫೆರಂಫಾಸ್.

**ಚಿಹ್ನೆಗಳು :** ಗಂಟಲಲ್ಲಿ ವ್ರಣ, ಬಿಳುಪು ಕಲೆ, ಟಾನ್ಸಿಲ್ ಗ್ರಂಥಿ ಊದಿಕೊಂಡಿರುವುದು, ನಾಲಿಗೆಯ ಮೇಲೆ ಕೊಳೆ ಕಟ್ಟಿರುವುದು, ನಡುಕ, ನಡರಿ ಹಾಗೂ ಕೈಕಾಲುಗಳಲ್ಲಿ ನೋವು ಶೂಲೆ–ಕಿವಿಯವರೆಗೆ ಪಸರಿಸುವುದು, ಹಸಿವು ಇರುವುದಿಲ್ಲ.

**ಪ್ರಮಾಣ :** ಹಿರಿಯರಿಗೆ ವೇಳೆಗೆ 4 ಮಾತ್ರೆಗಳು. ಕಿರಿಯರಿಗೆ ಎರಡು ಮಾತ್ರೆಗಳು. ದಿನಕ್ಕೆ 4 ವೇಳೆಗಳಂತೆ ಕೊಡುತ್ತ ಬರಬೇಕು.

## 11. ಜ್ವರ (FEVER)

**ಸಂಯೋಗ :** ಫೆರಂಫಾಸ್, ಕಾಲಿಮ್ಯೂರ್, ಕಾಲಿಸಲ್ಫ್, ನೇಟ್ರಂ ಸಲ್ಫ್, ನೇಟ್ರಂ ಮ್ಯೂರ್.

**ಚಿಹ್ನೆಗಳು :** ಎಲ್ಲಾ ಬಗೆಯ ಜ್ವರಗಳು, ಚಳಿ ಚಳಿ, ಎಲ್ಲಾ ಬಗೆಯ ಉರಿಯೂತಗಳೊಡಗೂಡಿದ ವ್ಯಾಧಿಗಳಿಗೆ ಮುಖ್ಯವಾದುದು.

**ಪ್ರಮಾಣ .** ಹಿರಿಯರಿಗೆ ವೇಳೆಗೆ 4 ಮಾತ್ರೆಗಳು. ಕಿರಿಯರಿಗೆ ಎರಡು ಮಾತ್ರೆಗಳು. ದಿನಕ್ಕೆ 4 ವೇಳೆಗಳಂತೆ ಕೊಡುತ್ತಾ ಬರಬೇಕು.

## 12. ತಲೆನೋವು (HEADACHE)

**ಸಂಯೋಗ :** ಫೆರಂಫಾಸ್, ಕಾಲಿಫಾಸ್, ಮೆಗ್ನೀಷಿಯಂ ಫಾಸ್, ನೇಟ್ರಂ ಮ್ಯೂರ್,

**ಚಿಹ್ನೆಗಳು :** ಎಲ್ಲಾ ಬಗೆಯ ತಲೆನೋವುಗಳು, ನರಶೂಲೆ, ರಕ್ತ ತಲೆಗೇರುವುದು, ಸಂಜೆ ಸಮಯದಲ್ಲಿ ಹಾಗೂ ಬೆಚ್ಚನೆಯ ಕೋಣೆಯಲ್ಲಿ ಶೂಲೆ ಉಲ್ಬಣಗೊಳ್ಳುವುದು. ಬಯಲ ಹವೆಯಲ್ಲಿ ಉಪಶಮನ ತಾಳುವುದು.

**ಪ್ರಮಾಣ :** ಹಿರಿಯರಿಗೆ ವೇಳೆಗೆ 4 ಮಾತ್ರೆಗಳು, ಕಿರಿಯರಿಗೆ 2 ಮಾತ್ರೆಗಳು ದಿನಕ್ಕೆ 4 ವೇಳೆಗಳಂತೆ ಕೊಡುತ್ತ ಬರಬೇಕು.

## 13, ಬಿಳಿಸೆರಗು (LEUCORRHOEA)

**ಸಂಯೋಗ :** ಕಲ್ಕೇರಿಯ ಫಾಸ್, ಕಾಲಿಸಲ್ಫ್, ನೇಟ್ರಂಮ್ಯೂರ್, ಫೆರಂಫಾಸ್.

**ಚಿಹ್ನೆಗಳು:** ಋತು ಸಮಯದಲ್ಲೂ, ಗರ್ಭಿಣಿಯಾಗಿರುವಾಗಲೂ, ಮುಟ್ಟು ನಿಲ್ಲುವ ಸಮಯದಲ್ಲೂ ಹಾಗೂ ಇನ್ನಿತರ ಸಮಯದಲ್ಲೂ ಉಂಟಾಗುವ ಎಲ್ಲಾ ಬಗೆಯ ಬಿಳಿ ಸೆರಗು. ನಿತ್ರಾಣ.

**ಪ್ರಮಾಣ:** ವೇಳೆಗೆ 4ಮಾತ್ರೆಗಳಂತೆ ದಿನಕ್ಕೆ 4ವೇಳೆಗಳಂತೆ ಪ್ರತಿ 3ಘಂಟೆಗೊಮ್ಮೆ ಸೇವಿಸಬೇಕು.

## 14, ಗೊಬ್ಬರ (MEASLES)

**ಸಂಯೋಗ:** ಫೆರಂಫಾಸ್, ಕಾಲಿಮ್ಯೂರ್, ಕಾಲಿಸಲ್ಫ್.

**ಚಿಹ್ನೆಗಳು;** ನೆಗಡಿ ಹಾಗೂ ಸೀನುಗಳು. ಮೂಗಿನಿಂದ ತೆಳ್ಳಗಿನ ದ್ರವ ಸುರಿಯುತ್ತಿರುವುದು. ಮೈಮೇಲೆ ಮರಳಿನಂತಹ ಗುಳ್ಳೆಗಳು, ಜ್ವರ, ಧ್ವನಿ ಕಟ್ಟುವುದು ನಾಲಿಗೆಯಮೇಲೆ ಕೊಳೆಕೂತಿರುವುದು,

**ಪ್ರಮಾಣ:** ಹಿರಿಯರಿಗೆ ವೇಳೆಗೆ 4ಮಾತ್ರೆಗಳು ಕಿರಿಯರಿಗೆ 2ಮಾತ್ರೆಗಳು. ದಿನಕ್ಕೆ 4ವೇಳೆಯಂತೆ ಕೊಡುತ್ತಾ ಬರಬೇಕು.

## ಮುಟ್ಟಿನ ಉಪದ್ರವಗಳು
## (MENSTRUATION TROUBLES)

**ಸಂಯೋಗ;** ಕಾಲಿಸಲ್ಫ್. ಮೆಗ್ನಿಷಿಯಾ ಫಾಸ್, ಕಲ್ಕೇರಿಯ ಫಾಸ್, ಫೆರಂಫಾಸ್.

**ಚಿಹ್ನೆಗಳು:** ವಯಸ್ಕರಿಗೂ ನಡುಹರೆಯದವರಿಗೂ ಉಂಟಾಗುವ ಎಲ್ಲಾ ಬಗೆಯ ಮುಟ್ಟಿನ ಉಪದ್ರವಗಳು ಮುಟ್ಟಿನ ಸ್ರಾವ ವಿಶೇಷವಿದ್ದು ದೀರ್ಘ ಅವಧಿಯವರೆಗೂ ಸ್ರವಿಸುತ್ತಿರುವುದು.

**ಪ್ರಮಾಣ:** ವೇಳೆಗೆ 4ಮಾತ್ರೆಗಳಂತೆ ದಿನಕ್ಕೆ 4ವೇಳೆಗಳಂತೆ ಕೊಡುತ್ತ ಬರಬೇಕು.

## 16. ನರಗಳ ದೌರ್ಬಲ್ಯ (NERVOUS EXHAUSTION)

**ಸಂಯೋಗ:** ಕಾಲಿಫಾಸ್. ಫೆರಂಫಾಸ್ ಕಲ್ಕೇರಿಯಂಫಾಸ್, ಮೆಗ್ನಿಷಿಯಂಫಾಸ್, ನೇಟ್ರಂಮ್ಯೂರ್.

**ಚಿಹ್ನೆಗಳು:** ಎಲ್ಲಾ ಬಗೆಯ ನರದೌರ್ಬಲ್ಯಗಳು. ಹೃದಯ ಹಾಗೂ ಜಠರದ ನಿತ್ರಾಣ. ನಿದ್ರೆ ಇಲ್ಲದಿರುವುದು.

**ಪ್ರಮಾಣ:** ಹಿರಿಯರಿಗೆ ವೇಳೆಗೆ 4ಮಾತ್ರೆಗಳು ಕಿರಿಯರಿಗೆ 2ಮಾತ್ರೆಗಳು. ದಿನಕ್ಕೆ 4ವೇಳೆಗಳಂತೆ ಕೊಡುತ್ತ ಬರಬೇಕು.

## 17. ಮೂಲ (PILES)

**ಸಂಯೋಗ:** ಕಲ್ಕೇರಿಯ ಫ್ಲೋರ್, ಕಾಲಿಫಾಸ್, ಕಾಲಿಮ್ಯೂರ್. ಫೆರಂಫಾಸ್.

**ಚಿಹ್ನೆಗಳು:** ಎಲ್ಲಾ ಬಗೆಯ ಮೂಲಗಳು: ಹೊರ ಮೂಲ. ಒಳ ಮೂಲ ರಕ್ತ ಮೂಲ, ನೋವಿರಲಿ ಅಥವ ನೋವಿಲ್ಲದಿರಲಿ.

**ಪ್ರಮಾಣ:** ಹಿರಿಯರಿಗೆ ವೇಳೆಗೆ ನಾಲ್ಕು ಮಾತ್ರೆಗಳು ಕಿರಿಯರಿಗೆ2 ಮಾತ್ರೆಗಳು. ದಿನಕ್ಕೆ 4ವೇಳೆಗಳಂತೆ ಕೊಡುತ್ತ ಬರಬೇಕು.

ಪ್ರಮಾಣ: ಹಿರಿಯರಿಗೆ ವೇಳೆಗೆ 4ಮಾತ್ರೆಗಳು ಕಿರಿಯರಿಗೆ 2ಮಾತ್ರೆಗಳು ದಿನಕ್ಕೆ 4ವೇಳೆಗಳಂತೆ ಕೊಡಬೇಕು.

## 24. ಶಕ್ತಿವರ್ಧಕ (TONIC)

ಸಂಯೋಗ: ಕಲ್ಕೇರಿಯಂಫಾಸ್, ಫೆರಂಫಾಸ್, ಕಾಲಿಫಾಸ್, ನೇಟ್ರಂ ಫಾಸ್, ಮೆಗ್ನಿಷಿಯಾ ಫಾಸ್,

ಚಿಹ್ನೆಗಳು: ಆಬಾಲ ವೃದ್ಧರಿಗೂ, ಹೆಚ್ಚಿನ ಹೆರಿಗೆಗಳಿಂದ ನಿತ್ರಾಣಗೊಂಡ ಸ್ತ್ರೀಯರಿಗೂ ಬಹು ಉಪಯುಕ್ತವುಳ್ಳದ್ದಿ, ಮಕ್ಕಳ ಬೆಳವಣಿಗೆಗೆ ಇದು ಬಹು ಉಪಯೋಗವುಳ್ಳದ್ದಿ.

ಪ್ರಮಾಣ: ಹಿರಿಯರಿಗೆ ವೇಳೆಗೆ 4ಮಾತ್ರೆಗಳು ಕಿರಿಯರಿಗೆ 2ಮಾತ್ರೆಗಳು ದಿನಕ್ಕೆ 4ವೇಳೆ ಕೊಡುತ್ತಾ ಬರಬೇಕು.

## 25. ಅಜೀರ್ಣ (INDIGESTION)

ಸಂಯೋಗ: ಮೆಗ್ನೀಷಿ ಫಾಸ್,ನೇಟ್ರಂ ಫಾಸ್.

ಚಿಹ್ನೆಗಳು: ಹೊಟ್ಟೆ ಉಬ್ಬರ. ಹೊಟ್ಟೆಯಲ್ಲಿ ಸದ್ದಾಗುವುದು ಹುಳಿತೇಗು ಅಜೀರ್ಣ ಹೊಟ್ಟೆನೋವು ತಲೆನೋವು ಅರಶಿಣ ಕಾಮಾಲೆ.

ಪ್ರಮಾಣ: ಹಿರಿಯರಿಗೆ ವೇಳೆಗೆ 4ಮಾತ್ರೆಗಳು. ಕಿರಿಯರಿಗೆ 2ಮಾತ್ರೆಗಳು ದಿನಕ್ಕೆ 4ವೇಳೆಗಳಂತೆ ಕೊಡುತ್ತಾ ಬರಬೇಕು.

## 26. ಸುಖಪ್ರಸವ(EASY BIRTH)

ಸಂಯೋಗ: ಕಲ್ಕೇರಿಯ ಪ್ಲೋರ್,ಮೆಗ್ನೀಷಿಯಾಫಾಸ್, ಕಾಲಿಫಾಸ್, ಫೆರಂಫಾಸ್.

ಚಿಹ್ನೆಗಳು: ಹೆರಿಗೆಗೆ ಸುಮಾರು ಮೂರು ಅಥವ ನಾಲ್ಕು ತಿಂಗಳಿರುವಾಗಲಿಂದ ಈ ಔಷಧಿಯನ್ನು ಕ್ರಮವಾಗಿ ಸೇವಿಸುತ್ತಾ ಬಂದರೆ ಜನನವು ಸುಖಕರವಾಗಿ ಆಗುವುದು.

## 27, ವೀರ್ಯವೃದ್ಧಿ (VITALITY)

ಸಂಯೋಗ: ನೇಟ್ರಂಫಾಸ್, ಕಾಲಿಫಾಸ್ ಫೆರಂಫಾಸ್, ಕಲ್ಕೇರಿಯ ಫಾಸ್. ನೇಟ್ರಂ ಮ್ಯೂರ್.

ಚಿಹ್ನೆಗಳು : ನಪುಂಸಕತ್ವ, ಬಲಹೀನತೆ, ಅಕಾಲ ವೃದ್ಧಾಪ್ಯ ಜನನೇಂದ್ರಿಯಂಗಳನ್ನು ಸಬಲಗೊಳಿಸುವುದು.

ಪ್ರಮಾಣ: ವೇಳೆಗೆ ನಾಲ್ಕು ಮಾತ್ರೆಗಳಂತೆ ದಿನಕ್ಕೆ ನಾಲ್ಕು ವೇಳೆ ಸೇವಿಸುತ್ತಾ ಬರಬೇಕು.

## 28. ವಿಶೇಷ ಟಾನಿಕ್ (GENERAL TONIC)

ಸಂಯೋಗ: ಕಲ್ಕೇರಿಯ ಫ್ಲೋರ್, ಕಲ್ಕೇರಿಯ ಫಾಸ್, ಫೆರಂಫಾಸ್, ಕಾಲಿಮ್ಯೂರ್, ಕಾಲಿಫಾಸ್, ಕಾಲಿಸಲ್ಫ್, ಮೆಗ್ನೀಷಿಯಫಾಸ್, ನೇಟ್ರಮ್ಯೂರ್ ನೇಟ್ರಂಫಾಸ್, ನೇಟ್ರಂಸಲ್ಫ್,ಸಿಲೀಷಿಯ.

ಚಿಹ್ನೆಗಳು: ಮಾನವನ ಶರೀರಕ್ಕೆ ಅತ್ಯಗತ್ಯ ಬೇಕಾದ ಹನ್ನೊಂದು ಬಗೆಯ ಲವಣಗಳು ನಿಯೋಜಿತ ರೀತಿಯಲ್ಲಿ ಸಮಿಶ್ರಗೊಳಿಸಲ್ಪಟ್ಟಿದೆ. ಕ್ಷಯ, ಜ್ವರ, ನ್ಯುಮೋನಿಯ ಭೇದಿ, ಕಂಠ ರೋಹಿಣಿ ಇತ್ಯಾದಿ ಉಗ್ರ ರೋಗಗಳಿಂದ ನರಳುತ್ತಿರುವರೂ ಅದರ ಹಿಡಿತದಿಂದ ಬಿಡಿಸಿಕೊಂಡು ಗುಣಮುಖವಾಗುತ್ತಿರುವಂತಹವರೂ ಇದನ್ನು ಸೇವಿಸುತ್ತಾ ಬರಬಹುದು, ಅಲ್ಲದೆ ಆರೋಗ್ಯವುಳ್ಳವರೂಕೂಡಾ ಇದನ್ನು ಉಪಯೋಗಿಸುತ್ತಾ ಬಂದರೆ ಹೊಸ ಹುರುಪೂ ನವಚೈತನ್ಯವೂ ಕಾಣಿಸಿಕೊಳ್ಳುವುದು.

ಪ್ರಮಾಣ: ಹಿರಿಯರಿಗೆ ವೇಳೆಗೆ 4ಮಾತ್ರೆಗಳು ಕಿರಿಯರಿಗೆ 2ಮಾತ್ರೆಗಳು ದಿನಕ್ಕೆ 4ವೇಳೆಗಳಂತೆ ಕೊಡುತ್ತಾ ಬರಬಹುದು.




# ಹೋಮಿಯೋಪತಿ ಪಾಲಿಪಾರ್ಮ ಸ್ಪ್ಯೂಟಿಕಲ್ ಔಷಧಿಗಳು

## (Dr. Murty's H. P. P Specifics)

ವೈದ್ಯ ಶಾಸ್ತ್ರದ ಒಳ ಹೊಕ್ಕು ಅನ್ವೇಷಣೆ ನಡೆಸದೆ, ಅವಸರ ಸಂದರ್ಭ ದಲ್ಲಿ ಆಯಾ ವ್ಯಾಧಿಗೆ ಆಯಾ ನಂಬರಿನ ಔಷಧಿಯನ್ನಿತ್ತರೆ ಗುಣ ದೊರೆಯು ವುದು. ಡಾ|| ಮೂರ್ತಿಯವರ ಈ ಹೆಚ್. ಪಿ. ಪಿ. ಸೆಟ್ ಒಂದು ನಿಮ್ಮ ಬಳಿ ಇದ್ದರೆ ಅನೇಕ ಉಪದ್ರವಗಳನ್ನು ಡಾಕ್ಟರ್ ನೆರವಿಲ್ಲದೆಯೇ ಗುಣ ಮಾಡಬಹುದು.

### 1. ನೆಗಡಿ, ತಲೆನೋವು

ಈ ಔಷಧವು ನೆಗಡಿ, ತಲೆನೋವು, ಜ್ವರ ಬರುವಂತಿರುವುದು, ಮೈ ಕೈ ನೋವು ಮುಂತಾದ ಉಪದ್ರವಗಳಿಗೆ ಯುಕ್ತವಾದದ್ದು. ಪ್ರಾರಂಭದಲ್ಲಿಯೇ ಈ ಔಷಧಿಯನ್ನು ಕೊಟ್ಟರೆ ರೋಗವನ್ನು ಹಬ್ಬಲು ಬಿಡದೆ ಕತ್ತರಿಸುವುದು.

### 2. ಸಾಮಾನ್ಯ ಜ್ವರ

ಈ ಔಷಧವು ಸಾಮಾನ್ಯ ಜ್ವರಕ್ಕೆ ಸಿದ್ಧೌಷಧವು. ಮೊದಲನೇ ನಂಬರಿನ ಔಷಧಿಯಿಂದ ಗುಣ ಕಂಡುಬರದ ಜ್ವರಗಳಿಗೆ ಇದನ್ನು ಕೊಟ್ಟರೆ ಗುಣ ಕಂಡು ಬರುವುದು.

## 3. ಅಜೀರ್ಣ, ವಾಂತಿ

ಈ ಔಷಧವು ಅಜೀರ್ಣ ವಾಂತಿ, ಹೊಟ್ಟೆನೋವು, ಹೊಟ್ಟೆ ಉಬ್ಬರ ಮುಂತಾದ ಉಪದ್ರವಗಳಿಗೆ ಉತ್ತಮವಾದದ್ದು.

## 4. ಭೇದಿ

ಈ ಔಷಧವು ಭೇದಿಗೆ ಪ್ರಧಾನವಾದದ್ದು. ಕೆಲ ಸಮಯಗಳಲ್ಲಿ ನಂಬರ್ 3ನ್ನೂ-ನಂಬರ್ 4ನ್ನೂ ಪ್ರತಿ ಎರಡು ಘಂಟೆಗೊಮ್ಮೆಯಂತೆ ಬದಲಾಯಿಸಿ ಕೊಡುತ್ತ ಬಂದರೆ ಉತ್ತಮ ಫಲವನ್ನೀಯುವುದು.

## 5. ಆಮಶಂಕೆ

ಈ ಔಷಧವು ಆಮಶಂಕೆಗೆ ಅತ್ಯುತ್ತಮವಾದದ್ದು. ಆಮ ರಕ್ತ ಬೆರತಿರಲಿ ಅಥವ ಬರೀ ಆಮವೋ ರಕ್ತವೋ ಮಾತ್ರವಿದ್ದರೂ ಕೂಡ ಈ ಔಷಧವು ಉಪಯುಕ್ತ ಬೀಳುವುದು. ಹೊಟ್ಟೆ ನುಲಿತವನ್ನು ಶಮನಗೊಳಿಸುವುದು.

## 6. ಮಲಬದ್ಧತೆ

ಈ ಔಷಧವು-ಎಷ್ಟೇ ದೀರ್ಘಕಾಲದಿಂದ ಕಾಡುತ್ತಿರುವ ಮಲಬದ್ಧತೆಯನ್ನಾದರೂ ನಿಶ್ಚಯವಾಗಿಯೂ ನೀಗಿಸುವುದು. ಈ ಔಷಧವನ್ನು ದಿನಂಪ್ರತಿ ಬೆಳಗ್ಗೆ ಮತ್ತು ಸಂಜೆ ಎರಡು ವೇಳೆಗಳಂತೆ ಕ್ರಮವಾಗಿ ಸೇವಿಸುತ್ತಾ ಬಂದರೆ ಮಲಬದ್ಧತೆ ಮಂಗಮಾಯವಾಗುವುದು.

## 7. ಮೂಲ, ಭಗಂದರ

ಈ ಔಷಧವು ಹೊರ ಮೂಲವಾಗಿರಲಿ, ಒಳ ಮೂಲವಾಗಿರಲಿ ಅಥವ ಭಗಂದರವೇ ಆಗಿರಲಿ, ಅದನ್ನು ತಪ್ಪದೆ ಗುಣಗೊಳಿಸುವುದು.

## 8. ಯಕೃತ್ತಿನ ಉಪದ್ರವ

ಈ ಔಷಧವು ಎಲ್ಲಾ ಬಗೆಯ ಯಕೃತ್ತಿನ ಉಪದ್ರವಗಳಿಗೂ ಸರ್ವ ಶ್ರೇಷ್ಠವಾದುದು. ಅಲ್ಲದೆ ಪಿತ್ತದ ಕಲ್ಲುಗಳಿಂದುಂಟಾಗುವ ಶೂಲೆ, ಪಿತ್ತ ಕೋಶದ ಉಪದ್ರವ, ಅರಶಿಣ ಕಾಮಾಲೆ ಮುಂತಾದುವುಗಳನ್ನು ಗುಣಗೊಳಿಸುವುದು. ದಿನಕ್ಕೆ ಮೂರು ವೇಳೆಗಳಂತೆ ಆರು ವೇಳೆಗಳವರೆಗೆ ಸೇವಿಸ ಬಹುದು.

## 9. ಮೂತ್ರಕೋಶದ ಉಪದ್ರವ

ಈ ಔಷಧವು ಮೂತ್ರ ಪಿಂಡಗಳಲ್ಲಿ ಚೆನ್ನಾಗಿ ಕೆಲಸ ಮಾಡುವುದು ಎಲ್ಲಾ ಬಗೆಯ ಮೂತ್ರ ಉಪದ್ರವಗಳಿಗೂ, ಊತಗಳಿಗೂ, ಮೂತ್ರದಲ್ಲಿ ಆಲ್ಬ್ಯುಮೆನ್ ಹೋಗುವುದಕ್ಕೂ ಸರ್ವ ಶ್ರೇಷ್ಠವಾದ ಔಷಧವು.

## 10. ಪ್ರಮೇಹ

ದುಷ್ಟ ಸ್ತ್ರೀ ಸಂಸರ್ಗದಿಂದ ಬರುವ ಪ್ರಮೇಹ (Gonorrhoea) ವ್ಯಾಧಿಯನ್ನು ಗುಣಗೊಳಿಸುವ ಏಕೈಕ ಔಷಧ.

## 11. ಉಪದಂಶ

ದುಷ್ಟ ಸ್ತ್ರೀ ಸಂಸರ್ಗದಿಂದ ಬರುವ ಇನ್ನೊಂದು ವ್ಯಾಧಿಯೇ–ಉಪ ದಂಶ (Syphilis). ಇದನ್ನು ಗುಣಗೊಳಿಸುವ ಶಕ್ತಿ ಈ ನಂಬರಿನ ಔಷಧಿ ಗಿರುವುದು.

## 12. ವೀರ್ಯ ವೃದ್ಧಿ

ಅಕಾಲ ವಯಸ್ಸಿನಲ್ಲೇ ಪೌರುಷವನ್ನು ಕಳೆದುಕೊಂಡವರಿಗೆ ಇದೊಂದು ಉತ್ತಮೋತ್ತಮ ಔಷಧ. ದಿನಂಪ್ರತಿ ಎರಡು ವೇಳೆಗಳಂತೆ ದೀರ್ಘ ಕಾಲದ ವರೆಗೆ ಸೇವಿಸುತ್ತ ಬರಬೇಕು.

## 13. ಮುಟ್ಟಿನ ಉಪದ್ರವ

ಸ್ತ್ರೀಯರ ಮಾಸಿಕ ಉಪದ್ರವಗಳನ್ನು ತಪ್ಪದೆ ತಪ್ಪಿಸುವುದು. ಎಲ್ಲಾ ರೀತಿಯ ತೊಂದರೆಗಳನ್ನೂ ನೀಗಿಸುವುದು.

## 14. ಬಿಳಿ ಸೆರಗು

ಸ್ತ್ರೀಯರನ್ನು ಕಾಡುವ ವ್ಯಾಧಿಯಲ್ಲಿ 'ಬಿಳಿ ಸೆರಗು' ಬಹು ಹಠಮಾರಿ ಯಾದುದು.ಎಷ್ಟೇ ಕಾಲದಿಂದ ಪೀಡಿಸುತ್ತಿರುವ ಬಿಳಿ ಸೆರಗನ್ನೂ ಬಿಡಿಸುವ ಶಕ್ತಿ ಈ ಔಷಧಿಗಿರುವುದು.

## 15. ಕೆಮ್ಮು, ಗಂಟಲಿನ ಉಪದ್ರವ

ಎಲ್ಲಾ ಬಗೆಯ ಗಂಟಲಿನ ಉಪದ್ರವಗಳಿಗೂ, ಕೆಮ್ಮು ಹಾಗೂ ಟಾನ್ಸಿಲಿಟಿಸ್ ವ್ಯಾಧಿಗೂ ಸೂಕ್ತವಾದ ಔಷಧ. ಇದರ ಕ್ರಮವಾದ ಸೇವನೆಯಿಂದ ಆ ಉಪದ್ರವಗಳಿಂದ ಪಾರುಮಾಡುವುದು.

## 16. ಕಿವಿ ಉಪದ್ರವ

ಕಿವಿಯಲ್ಲಿ ಉಂಟಾಗುವ ಸರ್ವ ಉಪದ್ರವಗಳನ್ನು ಉಪಶಮನಗೊಳಿಸುವ ಸರ್ವೋತ್ತಮ ಔಷಧ. ಇದರೊಡನೆ ಮುಲ್ಲನ್ ಎಣ್ಣೆಯನ್ನು ಕಿವಿಯಲ್ಲಿ ಹಾಕುತ್ತಾ ಬಂದರೆ ಗುಣ ತ್ವರೆಯಲ್ಲೂ-ತಪ್ಪದೆಯೂ ಸಿಕ್ಕುವುದು.

## 17. ಮಧುಮೇಹ

ಮಧುಮೇಹ ವ್ಯಾಧಿಗೆ ಬಹು ಉಪಯುಕ್ತವುಳ್ಳ ಔಷಧಿ. ಮೂತ್ರದ ಪ್ರಮಾಣವನ್ನು, ಮೂತ್ರದಲ್ಲಿಯ ಸಕ್ಕರೆ ಪ್ರಮಾಣವನ್ನು ಈ ಔಷಧವು ಕಡಿಮೆ ಮಾಡುವುದು. ಕ್ರಮವಾದ ಸೇವನೆಯಿಂದ ಮಧುಮೇಹ ವ್ಯಾಧಿಯನ್ನು ಗುಣಗೊಳಿಸುವುದು.

## 18. ಮಲೇರಿಯ

ಮಲೇರಿಯ ಅಥವ ಚಳಿ ಜ್ವರಕ್ಕೆ ಈ ಔಷಧಿಯು ಬಹು ಉಪ್ತಯುಕ್ತವಾದುದು. ದಿನಂಪ್ರತಿ 3 ವೇಳೆಯಿಂದ 6 ವೇಳೆಗಳವರೆಗೆ ಕ್ರಮವಾಗಿ ಸೇವಿಸುತ್ತಾ ಬಂದರೆ ಈ ವ್ಯಾಧಿಯನ್ನು ನಿಶ್ಚಯವಾಗಿಯೂ ನಿವಾರಿಸುವುದು.

## 19. ಚರ್ಮರೋಗ

ಎಲ್ಲಾ ಬಗೆಯ ಚರ್ಮರೋಗಗಳಿಗೂ ಇದನ್ನು ಕೊಡಬಹುದು. ಇದನ್ನು ಕ್ರಮವಾಗಿ ಹಾಗೂ ದೀರ್ಘ ಕಾಲದವರೆಗೆ ಸೇವಿಸುತ್ತಾ ಬಂದರೆ ಎಷ್ಟೇ ಕಾಲದಿಂದ ಕಾಡುತ್ತಿರುವ ಚರ್ಮವ್ಯಾಧಿಯಾದರೂ ಹೇಳ ಹೆಸರಿಲ್ಲದೆ ಮಾಯವಾಗುವುದು,

## 20. ಕೀಲ್ವಾಯು

ಕೀಲ್ವಾಯು, ಕೀಲ್ವಾತದ, ಜ್ವರ ಇವುಗಳಿಗೆ ಶ್ರೇಷ್ಠವಾದುದು, ಕೀಲುಗಳ ಬಾವು–ನೋವನ್ನು ಶಮನ ಗೊಳಿಸುವುದು. ದೀರ್ಘ ಕಾಲದಿಂದ ಕಾಡಿಸುತ್ತಿರುವ ಕೀಲುವಾತವನ್ನು ಗುಣ ಗೊಳಿಸುವುದು.

## 21. ಪಾರ್ಶ್ವವಾಯು

ಪಾರ್ಶ್ವವಾಯುವಿಗೆ ಶ್ರೇಷ್ಠವಾದ ಔಷಧ. ಶರೀರದ ಒಂದು ಭಾಗ ಪೀಡಿಸ್ಪಟ್ಟಿರಲಿ ನಡುವಿನಿಂದ ಕೆಳಭಾಗವನ್ನು ಮಾತ್ರ ಪೀಡಿಸಿರಲಿ ಅಥವ ನಾಲಿಗೆ, ಕಣ್ಣು ಇತ್ಯಾದಿ ಏಕ ಅಂಗವನ್ನಾದರೂ ಪೀಡಿಸಿರಲಿ....ಇದರಲ್ಲಿ ಯಾವ ಬಗೆಯದಿದ್ದರೂ ಈ ಔಷಧಿಯನ್ನು ಕ್ರಮವಾಗಿ ಸೇವಿಸಿದರೆ ವ್ಯಾಧಿ ಗುಣಹೊಂದುವುದು. ಈ ಔಷಧಿಯನ್ನು 'ಮಕ್ಕಳಲಕ್ವ'ಕ್ಕೂ ಕೊಡಬಹುದು. ದಿನಂಪ್ರತಿ 3ವೇಳೆಗಳಂತೆ ಕೊಡುತ್ತಾ ಬರಬೇಕು.

## 22. ಉನ್ಮಾದ

ಜನ್ನಿ, ಬಡಬಡಿಕೆ, ಮನೋಭ್ರಾಂತಿ.ಎಳೆವು ಮುಂತಾದುವುಗಳಿಗೆ ಮಾತ್ರ ವಲ್ಲದೆ ಉನ್ಮಾದ ಹುಚ್ಚು ಇತ್ಯಾದಿಗಳಿಗೂ ಉಪಯೋಗ ಬೀ ಳುವುದು. ವ್ಯಾಧಿಯ ಉಲ್ಬಣವನ್ನನುಸರಿಸಿ ದಿನಕ್ಕೆ 3ವೇಳೆಗಳಂತೆ ಘಂಟೆಗೊಂದು ವೇಳೆ ಯಂತೆ ಕೊಡುತ್ತಾ ಬರಬೇಕು.

## 23. ಮಕ್ಕಳಿಗೆ

ಶಿಶುಗಳಿಗೂ ಸಣ್ಣಮಕ್ಕಳಿಗೂ ಆಡಿಗಡಿಗೆ ಉಂಟಾಗುವ ನೆಗಡಿ ತಲೆ ನೋವು ಜ್ವರ, ವಾಂತಿ ಮುಂತಾದುಗಳಿಗೆ ಉತ್ತಮವಾದುದು. ಅಲ್ಲದೆ ಮಕ್ಕಳಿಗೆ ಹಲ್ಲು ಬರುವಾಗ ಉಂಟಾಗುವ ಬೇಧಿ ಮುಂತಾದ ಅನೇಕ ಉಪದ್ರವ ಗಳಿಗೆ ಅತಿಮುಖ್ಯವಾದುದು.

## 24. ನಾಯಿಕೆಮ್ಮು

ಈ ಔಷಧವು ನಾಯಿಕೆಮ್ಮಿಗೆ ಬಹು ಮುಖ್ಯವಾದುದು. ಇದರ ಕ್ರಮ ವಾದ ಸೇವನೆಯಿಂದ ನಾಯಿಕೆಮ್ಮಿನ ನರಕದಿಂದ ಪಾರಾಗುವವನ್ನು ಬಿಡಿಸುವುದು.

## 25. ಇನ್‌ಪ್ಲೂಯಂಜಾ

ಇನ್‌ಪ್ಲೂಯಂಜಾ ಜ್ವರಕ್ಕೆ ಈ ಔಷಧವು ರಾಮಬಾಣದಂತೆ ಕೆಲಸ ಮಾಡುವುದು.

## 26. ಡಿ. ಡಿಂಗ್ಯು ಜ್ವರ

ಇತ್ತೀಚಿಗೆ ಕಾಣಿಸಿಕೊಂಡು ಕಾಡಲಾರಂಭಿಸಿರುವ ಡಿಂಗ್ಯು ಜ್ವರಕ್ಕೂ ಅದನ್ನು ಹೋಲುವ ಇತರ ಜ್ವರಗಳಿಗೂ ಬಹು ಉಪಯುಕ್ತವುಳ್ಳದ್ದು.

Funding: Tattva Heritage Foundation,Kolkata. Digitization: eGangotri.


## ಔಷಧಿಯನ್ನು ಸೇವಿಸಬೇಕಾದ ಕಾಲ

ಅವಸರವಿರದ ದೀರ್ಘ ಕಾಲದ ವ್ಯಾಧಿಗಳಲ್ಲಿ ದಿನಕ್ಕೆ ಮೂರು ವೇಳೆಯು ಔಷಧಿ ಸಾಕಾಗುವುದು. ಸಮೀಪ ಕಾಲದ ವ್ಯಾಧಿಗಳಲ್ಲಿ ಅದರ ಉಗ್ರತೆಯನ್ನನುಸರಿಸಿ 3 ಘಂಟೆ, 2 ಘಂಟೆ, 1 ಘಂಟೆಗೊಮ್ಮೆಯಂತೆಯೂ ಔಷಧಿಯನ್ನು ಕೊಡುತ್ತಾ ಬರಬಹುದು. ವ್ಯಾಧಿಯ ಉಗ್ರತೆ ಕಡಿಮೆಯಾದಂತೆ ಔಷಧಿಗಳ ನಡುವಣ ಕಾಲಾವಕಾಶವನ್ನೂ ಬೆಳಸಬೇಕು. ಎಳೆವು-ಕಾಲರ ಮುಂತಾದ ವ್ಯಾಧಿಗಳಲ್ಲಿ ಪ್ರತಿ 15 ನಿಮಿಷಕ್ಕೊಮ್ಮೆಯಂತೆಯೂ ಕೊಡುತ್ತ ಬರಬಹುದು.

## ಔಷಧಿಯ ಪ್ರಮಾಣ

ಒಂದು ವೇಳೆಯ ಔಷಧವೆಂಬುದು ಹಿರಿಯರಿಗೆ 4 ಮಾತ್ರೆಗಳು. 3 ವಯಸ್ಸಿನಿಂದ 10 ವಯಸ್ಸಿನೊಳಗಿರುವವರಿಗೆ 2 ಮಾತ್ರೆಗಳು. 3 ವಯಸ್ಸಿಕ್ಕಿಂತ ಕಿರಿಯರಿಗೆ 1 ಮಾತ್ರೆಯಂತೆ ಕೊಡುತ್ತಾ ಬರಬೇಕು.

# ಹೋಮಿಯೋಪತಿಯ ಗ್ಲ್ಯಾಂಡುಲರ್ ತಯಾರಿಕೆಗಳು ಮತ್ತು ಚಿಕಿತ್ಸಾ ವಿವರ

## (Homoeopathic Glandular Preparaions and Therapautics)

ನಮ್ಮ ಶರೀರದ ಸಕ್ರಮ ಬೆಳವಣಿಗೆಯಲ್ಲಿ ನಿರ್ನಾಳ ಗ್ರಂಥಿಗಳು (Glandular System) ವಹಿಸುವ ಪಾತ್ರ ಅತ್ಯಂತ ಹಿರಿಯದು. ಇವು ಗಳು ಸೃಜಿಸುವ ಹಾರ್ಮೋನುಗಳು ರಕ್ತದಲ್ಲಿ ಮಿಶ್ರವಾಗಿ ಶರೀರ ಪೋಷಣೆಗೂ, ದೈಹಿಕ ಹಾಗೂ ಮಾನಸಿಕ ಬೆಳವಣಿಗೆಗೂ ಸಹಕಾರಿಯಾಗುತ್ತವೆ.

ಈ ಗ್ರಂಥಿಗಳ ಪೈಕಿ ಯಾವೊಂದು ಕೆಟ್ಟರೂ ವ್ಯಕ್ತಿಯ ದೈಹಿಕ ಹಾಗೂ ಶಾರೀರಕ ಸಮತೋಲ ತಪ್ಪುವುದು. ಈ ಹಾರ್ಮೋನುಗಳು ಹೆಚ್ಚಾಗಿ ಉತ್ಪತ್ತಿ ಯಾದರೂ ಕೆಡುಕಾಗುವುದು. ಕಡಿಮೆಯಾಗಿ ಉತ್ಪತ್ತಿಯಾದರೂ ಕೆಡಕಾಗು ವುದು, ಇವುಗಳನ್ನು ಸಮಸ್ಥಿತಿಯಲ್ಲಿ ನಿಯಂತ್ರಿಸಲು ಗ್ರಂಥಿಗಳಲ್ಲಿಯ ಲೋಪ ದೋಷಗಳನ್ನು ತಿದ್ದ ಬೇಕಾಗುವುದು.

ಈ ಗ್ರಂಥಿಗಳ ಹಾರ್ಮೋನುಗಳನ್ನು ಔಷಧಿ ರೂಪದಲ್ಲಿ ಈಗಾಗಲೇ ಅಲೋಪತಿಯವರು ಬಳಸುತ್ತಿರುವರು. ಇದನ್ನು ಅಮೇರಿಕಾದ B&T ಕಂಪೆನಿಯವರು ಹೋಮಿಯೋ ಪದ್ಧತಿಯ ಪ್ರಕಾರ ಸತ್ವಗೊಳಿಸಿರುವರು.

### ಸೆಕ್ರೀಟಿನ್ (SECRETIN)

ಕರುಳಿನಲ್ಲೂ ಮತ್ತು ಮೇಧೋಜೀವರಕಾಂಗದಲ್ಲೂ ಉಳ್ಳ ಗ್ರಂಥಿಗಳನ್ನು ಉತ್ತೇಜಿತಗೊಳಿಸುವುದು ; ಕರುಳಿನ ಮುಂದೂಡುವ ಶಕ್ತಿಯನ್ನು ಕ್ರಮಪಡಿ ಸುವುದರಿಂದ ಮಲಬದ್ಧತೆಯನ್ನು ನೀಗಿಸುವುದು. ಅಜೀರ್ಣದ ಉಪದ್ರವಕ್ಕೂ ಇದು ಅತ್ಯುಪಯುಕ್ತವುಳ್ಳದ್ದು.

## ಟೆಸ್ಟೀಸ್ (TESTES)

ವೃದ್ಧಾಪ್ಯದ ಬಲಹೀನತೆ, ಸಡಿಲತೆ, ಆಯಾಸ ಹಾಗೂ ನಪುಂಸಕತ್ವದ ಉಪದ್ರವಗಳು. ವೃಷಣದಲ್ಲಿಯ ವೀರ್ಯಾಣುಗಳ ಕೊರತೆಯಿಂದಾಗಿದ್ದರೆ ಅದನ್ನು ಈ ಔಷಧವು ನಿವರ್ತಿಸುವುದು.

## ಪ್ಲೆಸೆಂಟಾ (PLACENTA)

ಗರ್ಭವೇಷ್ಟನದಿಂದ ತಯಾರಿಸಿದ ಔಷಧಿ ಇದು. ಗರ್ಭಿಣಿಯರಿಗೆ ಉಂಟಾಗುವವಾಕರಿಕೆ, ವಾಂತಿ ಮುಂತಾದ ಉಪದ್ರವಗಳಲ್ಲೂ ಮತ್ತು ಹಾಲುಣಿಸುವ ತಾಯಂದಿರಿಗೆ ಹಾಲಿನ ಪ್ರಮಾಣ ಹೆಚ್ಚಿಸಲು ಇದನ್ನು ಕೊಡಬಹುದು. ಹಸು ಕರು ಹಾಕಿದಾಗ ಗರ್ಭವೇಷ್ಟವನ್ನು ಹಾಗೆಯೇ ಸೇವಿಸಿಬಿಡುವ ಕಾರಣದಿಂದಾಗಿ ಹಾಲು ಹೆಚ್ಚಿನ ಪ್ರಮಾಣದಲ್ಲಿ ಕರೆಯುವುದೆಂದು ಹೇಳಲಾಗುವುದು.

## ಪ್ರೋಸ್ಟೇಟ್ (PROSTATE)

ಈ ಔಷಧವು ಶರೀರದ ಆಯಾಸ, ನಿತ್ರಾಣ, ಶುಕ್ಲಕೋಶವನ್ನು ಶಸ್ತ್ರಚಿಕಿತ್ಸೆಯಿಂದ ಕತ್ತರಿಸಿದ ನಂತರ ಉಂಟಾಗುವ ನರಗಳ ದೌರ್ಬಲ್ಯಕ್ಕೂ ಉಪಯುಕ್ತ ಬೀಳುವುದು. ಅಲ್ಲದೆ ಶೀಘ್ರ ವೀರ್ಯಸ್ಖಲನಕ್ಕೂ, ವೃದ್ಧರ ಶುಕ್ಲಕೋಶವು ಹಿರಿದಾಗಿರುವುದಕ್ಕೂ ಉಪಯುಕ್ತ ಬೀಳುವುದು.

## ಸ್ಪ್ಲೀನ್ (SPLEEN)

ಅರಕ್ತತೆ, ಪ್ಲೀಹವೃದ್ಧಿ ಹಾಗೂ ಕ್ಷಯ-ಮಲೇರಿಯಾ ಮುಂತಾದ ದೀರ್ಘಕಾಲೀನ ವ್ಯಾಧಿಗಳಲ್ಲಿ ಶರೀರದ ತೂಕ ತಗ್ಗುವುದನ್ನು ತಪ್ಪಿಸುವುದು.

## ಪಾರೋಟಿಡ್ (PAROTID)

ಮಂಗನಬಾವು, ಕಂಠರೋಹಿಣಿ ರೀತಿಯ ಅಂಟು ಗುಣದ ಜ್ವರಗಳಲ್ಲೂ, ಅಂಡಾಶಯದಲ್ಲಿ ಮಿತಿಮೀರಿದ ರಕ್ತವೇರಿರುವ ಸಂದರ್ಭಗಳಲ್ಲೂ, ಅಲ್ಲದೆ

ತಲೆಶೂಲೆ, ನೋವಿನೊಡಗೂಡಿದ ಮುಟ್ಟು, ಹೆಚ್ಚಿನ ಸ್ರಾವದೊಡಗೂಡಿದ ಮುಟ್ಟು ಇತ್ಯಾದಿ ಉಪದ್ರವಗಳಲ್ಲೂ ಈ ಔಷಧಿಯು ಉಪಯುಕ್ತ ಬೀಳು ವುದು.

## ಥೈರಾಯಿಡ್ (THYROID)

ಮಾಂಸಖಂಡಗಳಲ್ಲಿ ಬಲಹೀನತೆ, ಕೀಲುಗಳಲ್ಲಿ ವಾತ ರೋಗ, ಉರಿ ಯೂತ, ಮಕ್ಕಳ ಮೆದು ಮೂಳೆ ರೋಗ (Ricket) ಗಂಡಮಾಲೆ, ಬೊಜ್ಜು ಮೈ, ಸ್ತನದ ಗಡ್ಡೆ, ಶರೀರದ ತೂಕ ತಗ್ಗುವುದು, ಮಕ್ಕಳ ಬೆಳ ವಣಿಗೆ ಕುಂಠಿತಗೊಂಡಿರುವುದು. ಋತು ಆಗಲು ತಡವಾಗುವುದು, ಮುರಿದ ಮೂಳೆಗಳು ಒಗ್ಗೂಡಲು ತಡವಾಗುವುದೇ ಮುಂತಾದ ಉಪದ್ರವಗಳಿಗೆ ಉತ್ತಮ ಔಷಧ.

## ಪಾರಾಥೈರಾಯಿಡ್ (PARATHYROID)

ಶರೀರದ ತೂಕ ತಗ್ಗುವಿಕೆ, ಚರ್ಮ ಒಣಗಿದಂತಾಗುವುದು, ಗಜಕರ್ಣ ಹಾಗೂ ಕೂದಲುದುರುವಿಕೆಗಳಿಗೆ ಈ ಔಷಧಿಯನ್ನು ಕೊಡಬಹುದು. ಪಾರಾ ಥೈರಾಯಿಡಿನ ರಸವು ಕೊರತೆ ಬಿದ್ದರೆ ಮಾಂಸಖಂಡಗಳ ನಡುಕದೊಡನೆ ಕೂಡಿದ ಪಾರ್ಶ್ವವಾತ, ಧನುರ್ವಾತದ ಚಿಹ್ನೆಗಳು ಕಾಣಿಸಿಕೊಳ್ಳಬಹುದೆಂದು ತಿಳಿದುಬಂದಿರುವುದು.

## ಸುಪ್ರಾ–ರಿನಲ್ (SUPRA-RENAL)

ಈ ಔಷಧವು ಅಡಿಸನ್ ವ್ಯಾಧಿ (Addison's Disease) ಎಂಬ ಮೂತ್ರಕೋಶದ ಮೇಲಿರುವ ಗ್ರಂಥಿಯ ವ್ಯಾಧಿ, ಕಣ್ಣಪಾಪೆಗಳು ಹೊರಕ್ಕೆ ಚಾಚಿಕೊಂಡಿರುವ ಗಂಡಮಾಲೆ, ಮುಡುದೋಷದೊಡಗೂಡಿದ ಕಾಲರ, ಅರಕ್ತತೆ, ಬಲಹೀನತೆಯು ಅಥವ ಕ್ರಮರಹಿತ ನಾಡಿಯೊಡನೆ ಕಡಿಮೆ ರಕ್ತ ಒತ್ತಡದ ಹೃದಯ ವ್ಯಾಧಿ, ಗೂರಲು ವ್ಯಾಧಿಗಳಲ್ಲಿ ಉಪಯೋಗ ಬೀಳು ವುದು.

## ಥೈಮಸ್ (THYMUS)

ಮಕ್ಕಳಿಗೆ ಬರುವಂತಹ ನರ ಸಂಬಂಧದ ಗೂರಲು, ನಾಯಿಕೆಮ್ಮು ಇವುಗಳಿಗೆ ಬಹು ಉಪಯುಕ್ತ, ಹೊರಬರುವ ಕಫ ಅಲ್ಪ ಪ್ರಮಾಣದಲ್ಲಿರುವುದು.

## ಪಿನಿಯಲ್ (PINEAL)

ದೈಹಿಕ ಉಪದ್ರವಗಳು ಇಲ್ಲದಿದ್ದರೂ ಮಕ್ಕಳ ಮಾನಸಿಕ ಬೆಳವಣಿಗೆ ಕುಗ್ಗಿರುವುದು. ಆ ಸಮಯದಲ್ಲಿ ಉಂಟಾಗುವ ಮಾನಸಿಕ ಗೊಂದಲ ಯೌವನೋದಯಕ್ಕೆ ಮುನ್ನ ಗಂಡು ಹೆಣ್ಣುಗಳಲ್ಲಿಯ ಮಾನಸಿಕ ಹಾಗೂ ದೈಹಿಕ ಬೆಳವಣಿಗೆಗೆ ಈ ಔಷಧವು ಬಹು ಸಹಾಯಕಾರಿ.

## ಪಾಂಕ್ರೀಸ್ (PANCRES)

ಮಧುಮೇಹ, ಪ್ಲೀಹದ ವ್ಯಾಧಿಗಳು, ಪ್ರತಿರೋಧಕ ಶಕ್ತಿಯ ಅಭಾವ, ಅಜೀರ್ಣದ ತೊಂದರೆ ಹಾಗೂ ಕಡಿಮೆ ರಕ್ತ ಒತ್ತಡದ ವ್ಯಾಧಿಗಳಿಗೆ ಬಹು ಉಪಯುಕ್ತವುಳ್ಳದ್ದು.

## ಪಿಟ್ಯುಟರಿ (PITUTARY)

ಎಳೆಯುವರಲ್ಲೂ ತರುಣರಲ್ಲೂ ಬೆಳವಣಿಗೆ ಕುಗ್ಗಿರುವುದು. ಸ್ಥೂಲತ್ವ. ದಪ್ಪ ಸ್ತ್ರೀಯರಿಗೆ ತಲೆ ಶೂಲೆಯೊಡನೆ ಮುಟ್ಟು ತಡೆದಿರುವುದು, ಹೆಚ್ಚಿನ ರಕ್ತ ಒತ್ತಡ, ಶುಕ್ಲ ಕೋಶದಲ್ಲಿ ದಾಹ ಮುಂತಾದುವುಗಳಿಗೆ ಈ ಔಷಧ ಬಹು ಒಳ್ಳೆಯದು.

## ಬ್ರೈನ್ (BRAIN)

ಜೀರ್ಣಕೋಶದ ಅಕ್ರಮ, ಮಲಬದ್ಧತೆ ಹಾಗೂ ಯಕೃತ್ತಿನ ಕ್ರಿಯಾಲೋಪ ಮುಂತಾದ ಉಪದ್ರವಗಳಿಗೆ ಉತ್ತಮವಾದುದ್ದು, ಅಲ್ಲದೆ ಟಾನ್ಸಿಲಿ

ಟಿಸ್ ಮತ್ತು ಅಡಿನಾಯಿಡ್ಸ್‌ಗಳನ್ನು ಶಸ್ತ್ರ ಚಿಕಿತ್ಸೆಯಿಂದ ಕತ್ತರಿಸಿದ ಮೇಲೆ ಉಂಟಾಗುವ ಉಪದ್ರವಗಳಿಗೆ ಉಪಯುಕ್ತವುಳ್ಳದ್ದೆಂದು ನಿರೂಪಿಸಲ್ಪಟ್ಟಿದೆ.

## ಕಾರ್ಪಸ್ ಲ್ಯೂಟಿಯಂ (CORPUS LEUTEUM)

ಈ ಔಷಧವು ಮುಖ್ಯವಾಗಿ ತಡವಾದ ಮುಟ್ಟು ತಾರುಣ್ಯದ ಹೆಂಗಸರಲ್ಲಿ ಮುಟ್ಟು ಆಗದಿರುವುದು ಮುಟ್ಟು ನಿರಂತರವಾಗಿ ನಿಲ್ಲುವ ಸಮಯದಲ್ಲಿ ಶರೀರವು ಸ್ಥೂಲವಾಗುವ ಸೂಚನೆ. ಗರ್ಭಧರಿಸಿರುವ ಆರಂಭ ಕಾಲದಲ್ಲಿ ವಾಕರಿಕೆ ವಾಡಿಕೆಯಾಗಿ ಉಂಟಾಗುವ ಗರ್ಭಪಾತ ಇವುಗಳಿಗೆ ಬಹು ಉಪಯುಕ್ತವುಳ್ಳದ್ದು.

## ಡುಯೋಡನಂ (DUODENUM)

ಜೀರ್ಣಾಂಗಗಳಲ್ಲಿ ಉಪದ್ರವಗಳು. ಹೊಟ್ಟೆನೋವು ಮಲಬದ್ಧತೆ ಯಕೃತ್ತಿನ ಕ್ರಿಯಾಲೋಪ ಮುಂತಾದ ತೊಂದರೆಗಳಲ್ಲಿ ಚೆನ್ನಾಗಿ ಕೆಲಸ ಮಾಡುವುದು.

## ಮಮ್ಮರಿ (MAMMARY)

ಯೌವನದ ಸ್ತ್ರೀಯರಿಗೆ ಅಡಿಗಡಿಗೆ ಹಾಗೂ ಅತಿ ಹೆಚ್ಚಿನ ಪ್ರಮಾಣದಲ್ಲಿ ಮುಟ್ಟಿನ ಸ್ರಾವವಾಗುವುದು. ಅಧಿಕಾರ್ತವದೊಡನೋ ಇಲ್ಲವೇ ಮುಟ್ಟಿನ ನಡುವೆ ಏರ್ಪಡುವ ಗರ್ಭಾಶಯದ ಗಡ್ಡೆಗಳ ಉಪದ್ರವದಲ್ಲಿಯೋ, ರಕ್ತಸ್ರಾವಕ್ಕೋ ಈ ಔಷಧವು ಹೆಚ್ಚು ಉಪಯುಕ್ತ ಬೀಳುವುದು.ತಾಯಂದಿರಿಗೆ ಸ್ತನದಲ್ಲಿ ಹೆಚ್ಚಿನ ಹಾಲು ಉತ್ಪತ್ತಿಯಾಗಲೂ ಇದನ್ನು ಕೊಡಬಹುದು (ಗರ್ಭ ಸಮಯದಲ್ಲಿ ಈ ಔಷಧಿಯನ್ನು ಉಪಯೋಗಿಸಬಾರದು)

## ಆರ್ಕಿಕ್ (ORCHIC)

ಗಂಡಸರ ಪೌರುಷ ಹೀನತೆ, ಅಕಾಲದ ವೃದ್ಧಾಪ್ಯ,ಬೆಳವಣಿಗೆಯ ಕೊರತೆ. ಇವುಗಳಲ್ಲಿ ಚೆನ್ನಾಗಿ ಕೆಲಸಮಾಡುವುದು ನಪುಂಸಕತ್ವ ಶುಕ್ಲಕೋಶದ ಉರಿಯೂತಮುಂತಾದ ಉಪದ್ರವಗಳಲ್ಲೂ ಉಪಯುಕ್ತ ಬೀಳುವುದು.

## ಓವರಿಯನ್ (OVARIAN)

ಮುಟ್ಟು ಆಗದಿರುವುದು, ಮುಟ್ಟು ನೋವಿನೊಡಗೂಡಿ ಆಗುವುದು, ರತಿಯಲ್ಲಿ ಬೇಸರ ಇತ್ಯಾದಿ ಚಿಹ್ನೆಗಳಿಗೆ ಬಹು ಉಪಯುಕ್ತ,

ಪ್ರಮಾಣ:–

ಪ್ರತಿಯೊಂದು ಗ್ಲಾಂಡುಲರ್ ಔಷಧಿಯೂ 3×ಸತ್ವದಲ್ಲಿರುವುದು.ಹಿರಿಯರು ವೇಳೆಗೆ 2ಮಾತ್ರೆಗಳಂತೆ 2ಅಥವ 3ಬಾರಿ.ಕಿರಿಯರು ವೇಳೆಗೆ 1ಮಾತ್ರೆಯಂತೆ 2ಅಥವ 3ಬಾರಿ ಸೇವಿಸಬೇಕು.

# ಕೆಲ ಅಪೂರ್ವ ಹೋಮಿಯೋಪತಿ ಔಷಧಿಗಳು

ಹೋಮಿಯೋಪತಿಯ ಔಷಧಿ ಗುಣ ಧರ್ಮ ಶಾಸ್ತ್ರದಲ್ಲಿ ಅದೆಷ್ಟೋ ಔಷಧಿಗಳಿರುವುವು, ಅವುಗಳಲ್ಲಿ ಕೆಲವು ಅಡಿಗಡಿಗೆ ಉಪಯುಕ್ತ ಬೀಳು ವಂತಿರುವುವು. ಹಾಗೇ ಇನ್ನು ಕೆಲವು ಅಪೂರ್ವ ಔಷಧಿಗಳೂ ಇರುವುವು. ಇವುಗಳನ್ನು ಸರಿಯಾಗಿ ಬಳಸಿದರೆ ಅಚ್ಚರಿಯ ಫಲವನ್ನು ಅತಿ ಶೀಘ್ರದಲ್ಲಿ ನಿರೀಕ್ಷಿಸಬಹುದು. ಆ ಬಗೆಯ ಕೆಲ ಅಪೂರ್ವ ಹೋಮಿಯೋಪತಿ ಔಷಧಿಗಳನ್ನು ಇಲ್ಲಿ ಪರಿಚಯ ಮಾಡಿಸಲಾಗಿದೆ.

## ಬ್ಲಾಟ್ಟಾ ಅಮೇರಿಕಾನಾ
## (BLATTA AMERICANA)–(30, 2000)

ಮಹೋದರ (ACITIS) ಹಾಗೂ ಇನ್ನಿತರ ನಿರ್ಬಾವುಗಳಿಗೆ, ಊತಗಳಿಗೆ ಉತ್ತಮವಾದುದು. ಮೂತ್ರಿಸುವಾಗ ಮೂತ್ರ ದ್ವಾರದಲ್ಲಿ ಉರಿ. ವಿಪರೀತ ನಿತ್ರಾಣ ಹಾಗೂ ಶರೀರವಿಡೀ ಹಳದಿ ವರ್ಣಕ್ಕೆ ತಿರುಗು ವುದು.

## ಅಂಥ್ರಾಕ್ಸಿನ್ [ANTHRAXIN] [30, 200]

ಇದು ಪ್ಲೀಹದ ಉಪದ್ರವಕ್ಕೆ ಅತ್ಯುತ್ತಮ ಔಷಧಿ. ಕೀವು ಕಟ್ಟಿದ ಕುರು ಗಳು ಬೆನ್ನುಪಣೆ ಅಪಾಯಕರವಾದ ವ್ರಣಗಳಲ್ಲೂ ಇದನ್ನು ಉಪಯೋಗಿಸ ಬಹುದು ಇಂತಹ ಸಮಯದಲ್ಲಿ ಉಗ್ರವಾದ ಉರಿ ಇರುವುದು. ಈ ಔಷಧಿಯು ಆರ್ಸನಿಕು ಔಷಧಿಯನ್ನೂ ಟಾರಂಟೂಲ ಔಷಧಿಯನ್ನು ಹೋಲುತಿರು ವುದು.

## ಚಾಪ್ಪಾರೋ ಅಮೇರಿಕಾನಾ
## [CHAPPARO AMERICANA] [30, 200]

ದೀರ್ಘಕಾಲದಿಂದ ಕಾಡುತ್ತಿರುವ ಭೇದಿಗೆ ಬಹು ಉಪಯುಕ್ತವುಳ್ಳ ಔಷಧ. ಮಲದಲ್ಲಿ ಆಮ ಬಹಳವಿರುವುದು. ಆಮಶಂಕೆಯುಂತಿದ್ದರೂ 'ನೋವು' ಅಷ್ಟು ತೀವ್ರತೆಯಿಂದಿರುವುದಿಲ್ಲ.

## ಕೊರಿಜಾ [CORYZA] [30, 200]

ದೀರ್ಘಕಾಲೀನ ನೆಗಡಿ. ಮೂಗಿನಲ್ಲಿ ನೀರಿನಂತೆ ಸುರಿಯುತ್ತಿರುವುದು, ಅಲ್ಪಕಾಲದ ನೆಗಡಿಯಲ್ಲೂ ಇನ್‌ಫ್ಲ್ಲುಯಂಜಾ ಜ್ವರದ ಆರಂಭ ಘಟ್ಟದಲ್ಲೂ ಇದನ್ನು ಉಪಯೋಗಿಸಬಹುದು. ವ್ಯಾಧಿಯನ್ನು ಗುಣಗೊಳಿಸಲಿಕ್ಕೆ ಮಾತ್ರ ವಲ್ಲದೆ ಇದನ್ನು ನಿರೋಧಕ ಔಷಧಿಯಾಗಿಯೂ (Preventive Medicine) ಬಳಸಬಹುದು.

## ಡಿಸೆಂಟರಿ (DYSENTERY) (30, 200)

ದೀರ್ಘಕಾಲದಿಂದ ಕಾಡುತ್ತಿರುವ ಆಮಶಂಕೆಗೆ ಬಹು ಉಪಯುಕ್ತವುಳ್ಳದ್ದು,ಚಿಹ್ನೆಗೆ ತಕ್ಕ ಹೋಮಿಯೋಪತಿ ಔಷಧಿಯೊಡನೆ ಸಹಾಯಕ ಔಷಧಿಯಾಗಿ ಇದನ್ನು ಕೊಡುತ್ತಾ ಬರಬಹದು.

## ಇಯೋಸಿನ್ (EOSIN) (30, 200)

ಅರ್ಬುದ ರೋಗಕ್ಕೂ, ಕೀಲುಗಳ ಉರಿಯೂತಕ್ಕೂ, ಬಹು ಮುಖ್ಯವಾದುದೆಂದು ಇದನ್ನು ನಿರ್ಣಯ ಮಾಡುವಾಗ ಕಂಡುಹಿಡಿದ ಡಾ|| ಉಡ್ ಬೇರಿಯವರು ಅಭಿಪ್ರಾಯಪಡುತ್ತಾರೆ. ಕೈಕಾಲುಗಳಲ್ಲಿಯ ಉಗುರುಗಳ ಅಡಿ ಭಾಗದಲ್ಲೂ ಮತ್ತು ಪಾದಗಳ ಅಡಿಯಲ್ಲೂ ಉರಿ. ಮೊಳಕಾಲಿನ ಚರ್ಮದಲ್ಲಿ ನವೆ ಹಾಗೂ ಕೆಂಪಕ್ಕಾಗಿರುವುದು. ಅಂಗೈಯಲ್ಲೂ ಕೆಂಪೇರಿರುವುದು. ತಾನು ಬಹು ಎತ್ತರಕ್ಕೆ ಬೆಳೆದಿರುವಂತಹ ವಿಚಿತ್ರ ಮನೋಭಾವ ಮತ್ತು ಬವಳಿಯೂ ಉಂಟಾಗುವುದು.

## ಫಿಸ್ಟುಲಾಡೆಂಟ್ (FISTULADENT) (30, 200)

ದೀರ್ಘಕಾಲದಿಂದ ಕಾಡುತ್ತಿರುವ ಭಗಂದರಕ್ಕೆ ಹೆಚ್ಚು ಉಪಯೋಗವುಳ್ಳದ್ದು.

## ಗನೋರಿನ್ (GONORRHIN) (30, 200)

ಪ್ರಮೇಹ ವ್ಯಾಧಿಯ ಪ್ರಥಮಾವಸ್ಥೆಯಲ್ಲೂ ಮತ್ತು ದೀರ್ಘಾವಸ್ಥೆಯಲ್ಲೂ ಉಪಯುಕ್ತ ಬೀಳುವುದು.

## ಮಲೇರಿಯ ಅಫಿಷಿಯಾನಲಿಸ್ (MALARIA OFFICIA-NALIS) (30, 200, 1000)

ಮಲೇರಿಯಾ ರೋಗಾಣುವನ್ನು ದೇಹದಿಂದ ಹೊರಹಾಕುವ ಶಕ್ತಿ ಇದಕ್ಕಿರುವುದು. ಮಲೇರಿಯ ಜ್ವರದ ನಂತರ ಉಂಟಾಗುವ ಉಪದ್ರವಗಳನ್ನು ಪರಿಹರಿಸುವ ಶಕ್ತಿಯೂ ಇದಕ್ಕುಂಟು. ಅಲ್ಲದೆ ನಿತ್ರಾಣ, ಯಕೃತ್ತು ಮತ್ತು ಪ್ಲೀಹದ ಉಪದ್ರವ, ವಾತರೋಗಗಳಾದಿಯಾಗಿ ಗುಣ ಮಾಡುವುದು.

## ಪೈರಾರಾ (PYRARA) (30, 200, 1000)

ಹಲ ಬಗೆಯ ಚರ್ಮ ವ್ಯಾಧಿಗಳಲ್ಲಿ ಆಳವಾಗಿ ಒಳಹೊಕ್ಕು ದೀರ್ಘವಾಗಿ ಕೆಲಸ ಮಾಡುವ ಔಷಧವಿದು. ಕುಷ್ಠ, ಕ್ಷಯಗಡ್ಡೆ, ಪ್ರಮೇಹದ ಗಡ್ಡೆ, ರಕ್ತನಾಳಗಳಲ್ಲಿಯ ಬಾವು ಇತ್ಯಾದಿ ಉಪದ್ರವಗಳಲ್ಲಿ ಉಪಯುಕ್ತ ಬೀಳುವುದು.

## ಮೆಲ್ ಕಂ ಸೇಲ್ (MEL CUM SALE) (30, 200)

ಇದು ಜೇನು–ಉಪ್ಪು ಬೆರತ ಒಂದು ಮಿಶ್ರಣ. ಹೊಕ್ಕಳು ಕೆಳಗಿನ ಹೊಟ್ಟೆಯಲ್ಲೂ, ಸಣ್ಣ ಕರುಳಿನ ಅಂತ್ಯ ಭಾಗದಲ್ಲೂ ವ್ರಣ ಭಾವನೆ ಇರುವ

Funding: Tattva Heritage Foundation,Kolkata. Digitization: eGangotri.



ಸಂದರ್ಭಗಳಲ್ಲಿ ಈ ಔಷಧವು ಉಪಯೋಗ ಬೀಳುವುದು. ಅಲ್ಲದೆ ಗರ್ಭಕೋಶದ ಉರಿಯೂತ, ಗರ್ಭಕೋಶ ಸ್ಥಳಾಂತರ ಹೊಂದುವುದು ಇತ್ಯಾದಿ ಉಪದ್ರವಗಳಿಗೂ ಉಪಯುಕ್ತ ಬೀಳುವುದು.

## ನೇಟ್ರಂ ಸೇಲಿನಿಕಂ (NATRUM SELENICUM) (30, 200)

ಧ್ವನಿ ಪಟ್ಟಿಗೆಗೆ ಸಂಬಂಧಿಸಿದಂತಹ ಕ್ಷಯದಲ್ಲಿ ಈ ಔಷಧವು ಹೆಚ್ಚು ಉಪಯುಕ್ತ ಬೀಳುವುದು. ಗಂಟಲಲ್ಲಿ ನವೆ, ಕಫದಲ್ಲಿ ರಕ್ತ ಬೀಳುವುದು.

## ನೆಗುಂದಿಯಂ (NEGUNDIUM) (30, 200, 1000)

ತಡೆಯಲಾರದ ಬಾಧೆಯೊಡಗೂಡಿದ ಮೂಲ. ಮಲಕೋಶದಲ್ಲಿಯ ರಕ್ತನಾಳಗಳುಬ್ಬಿರುವಾಗ ಈ ಔಷಧ ಹೆಚ್ಚು ಉಪಯುಕ್ತ ಬೀಳುವುದು.

## ಆರ್ಕಿಟಿನಂ (ORCHITINUM) (30, 200)

ಅಂಡಕೋಶಗಳನ್ನು ಶಸ್ತ್ರ ಚಿಕಿತ್ಸೆಯಿಂದ ಕತ್ತರಿಸಿದ ಮೇಲೆ ಉಂಟಾಗುವ ಉಪದ್ರವಗಳಿಗೆ ಉಪಯುಕ್ತವಾದುದು. ರತಿಯಲ್ಲಿ ನಿತ್ರಾಣ, ಅಕಾಲಿನ ವೃದ್ಧಾಪ್ಯ, ಬೆಳವಣಿಗೆ ತಡೆಗೊಂಡಿರುವುದೇ ಮುಂತಾದವುಗಳಿಗೆ ಶ್ರೇಷ್ಠವಾದುದು.

## ಪಿಕ್ರೋಟಾಕ್ಸಿನಂ (PICROTOXINUM) (30, 200)

ಅಪಸ್ಮಾರ, ಮುಖ್ಯವಾಗಿ ಬೆಳಗಿನ ವೇಳೆಯಲ್ಲಿ ಬರುವಂತಹದು. ಹರ್ನಿಯಾ, ಮಾಂಸಖಂಡಗಳ ಸಹಕಾರದಲ್ಲಿ ಲೋಪ, ರಾತ್ರಿಯಲ್ಲಿ ಬೆವರುವುದೇ ಮುಂತಾದ ಚಿಹ್ನೆಗಳಲ್ಲಿ ಈ ಔಷಧವು ಚೆನ್ನಾಗಿ ಕೆಲಸ ಮಾಡುವುದು.

## ಸೆಪ್ಟಿಕೇಮಿಯ (SEPTICAEMIA) (30, 200)

ಎಲ್ಲಾ ಬಗೆಯ ನಂಜಿನ ಪರಿಸ್ಥಿತಿಗೂ (Septic Condtion) ಯುಕ್ತವಾದುದು, ಮುಖ್ಯವಾಗಿ ಗರ್ಭಪಾತ ಹೆರಿಗೆ ಹಾಗೂ ನಂಜಿನ ಜ್ವರಗಳಿಗೆ ಉತ್ತಮವಾದುದು.

## ಸ್ಟ್ಯಾಪಿಲೋ ಕಾಕ್ಸಿನ್ (STAPHYLO COCCIN) (30, 200, 10 M. C. M)

ಮೇದಸ್ಸನ್ನು ಉತ್ಪತ್ತಿ ಮಾಡುವ ಗ್ರಂಥಿಗಳಲ್ಲಿ ದಾಹ, ಕೀವು ಕುರುಗಳು, ಕಜ್ಜಿ, ಶ್ವಾಶಕೋಶದ ಹೊದಿಕೆಯಾದ ಪ್ಲೂರಾದಲ್ಲೂ, ಹೃದಯ ಭಾಗಗಳಲ್ಲೂ ಉರಿಯೂತಉಂಟಾದಾಗ ಉಪಯುಕ್ತವಾದುದು.

## ಟ್ರಿಬುಲಸ್ ಟರೆಸ್ಟ್ರಿಸ್ (TRIBULUS TERRESTRIS) (30, 200)

ಈ ಔಷಧಿಯು ಮುಖ್ಯವಾಗಿ ಜನನೇಂದ್ರಿಯದ ಮೇಲೆ ಚೆನ್ನಾಗಿ ಕೆಲಸ ಮಾಡುವುದು. ರತಿಯಲ್ಲಿ ಮಿತಿ ಹೋದವರಿಗೆ ಇದೊಂದು ಉತ್ತಮ ಔಷಧ. ವೀರ್ಯವು ತೆಳ್ಳಗಾಗಿರುವುದು. ಶೀಘ್ರಸ್ಖಲನ, ಜನನೇಂದ್ರಿಗಳ ನಿತ್ರಾಣ, ಮೂತ್ರಕಟ್ಟು, ಮೂತ್ರವು ತನ್ನರಿವಿಲ್ಲದೆಯೇ ವಿಸರ್ಜನೆಯಾಗುವುದು.

## ಉಪಾಸ್ ಟೈಂಟೀ (UPAS TIENTE) (30, 200)

ಮಾಂಸಖಂಡಗಳಲ್ಲಿಯ ನೋವಿಗೂ, ಬಲಭಾಗದ ಶ್ವಾಶಕೋಶದಿಂದ ಯಕೃತ್ತಿನತ್ತ ಹಾಯುವ ಶೂಲೆಗೂ, ಕಣ್ಣಿನ ಕೆರಳಿಕೆಗೂ, ತಲೆನೋವಿಗೂ ಶ್ರೇಷ್ಠವಾದುದು. ರೋಗಿ ಸಿಡಿಮಿಡಿಯುತ್ತಿರುವರು.




# ಔ ಷ ಧಿ ಗ ಳ

## ಪ್ಯಾಕಿಂಗ್ ಮತ್ತು ಅವುಗಳ ಕ್ರಯ ವಿವರಗಳು

| ಪುಟ | ಔಷಧಿಯ ಹೆಸರು | ಪ್ಯಾಕಿಂಗ್ | ಕ್ರಯ |
|---|---|---|---|
| 9 | ಆಲ್ಫಾಬೆಕ್ಸ್ | 112 ಮಿ. ಲಿ. | 3.75 |
| " | " | 450 ಮಿ. ಲಿ. | 13.00 |
| 10 | ಬಹೋಲೆಪ್ | 50 ಮಾತ್ರೆಯ ಶೀಶೆ | 3.00 |
| " | ಡಿಲೆಂಡ್ (ಸಾಮಾನ್ಯ) | 40 ಮಾತ್ರೆಯ ಶೀಶೆ | 3.00 |
| " | " (ವಿಶೇಷ) | " | 5.00 |
| 11 | ಡಿವೈನ್ | 30 ಮಾತ್ರೆಯ ಶೀಶೆ | 4.00 |
| 12 | ಡಯರಾಜ್ | 50 ಮಾತ್ರೆಯ ಶೀಶೆ | 3.00 |
| " | ಡೈಬೆಟ್ | 30 ಮಿ. ಲಿ. ಶೀಶೆ | 3.00 |
| 13 | ಎಪಿಲೊಕ್ಕೋ | 180 ಮಾತ್ರೆಯ ಶೀಶೆ | 2.00 |
| 14 | ಹೋಮೋಸಿಲಿನ್ (ಇಂಜೆಕ್ಷನ್) | 6×1 ಸಿ ಸಿ. ಆಂಪ್ಯೂಲ್ | 2.50 |
| " | " ( " ) | 10 ಮಿ. ಲಿ. ವಯಲ್ | 2.50 |
| " | " (ಮಾತ್ರೆಗಳು) | 100×3 ಗ್ರೇಯಿನ್ | 3.00 |
| " | ಹೋಮೋಕಾರ್ಡ್ | 30 ಮಿ. ಲಿ. ಶೀಶೆ | 3.00 |
| 15 | ಹೋಮೋಸರ್ಪ್ | 90 ಮಾತ್ರೆಯ ಶೀಶೆ | 4.00 |

| ಪುಟ | ಔಷಧಿಯ ಹೆಸರು | ಪ್ಯಾಕಿಂಗ್ | ಕ್ರಯ |
|---|---|---|---|
| 16 | ಲ್ಯೂಸಿಟ್ಯಾಬ್ಸ್ | 50 ಮಾತ್ರೆಯ ಶೀಶೆ | 2.50 |
| " | ಮೆಂನರೆಗ್ | 50 ಮಾತ್ರೆಯ ಶೀಶೆ | 2.50 |
| 17 | ಪೈಲೆಟ್ | 50 ಮಾತ್ರೆಯ ಶೀಶೆ | 2.50 |
| " | ಸಾನಿಕೋ | 180 ಮಾತ್ರೆಯ ಶೀಶೆ | 2.00 |
| 18 | ಸೋದರಿ | 30 ಮಿ. ಲಿ. ಶೀಶೆ | 3.00 |
| 19 | ಸಂಬಾ | 8 ಮಾತ್ರೆಯ ಸ್ಟ್ರಿಪ್ | 1.50 |
| 20 | ಟೆರಿಕೋ | 180 ಮಾತ್ರೆಯ ಶೀಶೆ | 2.00 |
| " | ಎಟ್ರಂ | 50 ಮಾತ್ರೆಯ ಶೀಶೆ | 4.00 |
| 21 | ಎಟ್ರಂ–ಇ | 50 ಮಾತ್ರೆಯ ಶೀಶೆ | 3.50 |
| 22 | 'ಬಹೋಲ' ಬಯೋ ಕಾಂಪ್ಲೆಕ್ಸ್ ಮಾತ್ರೆಗಳು | 20 ಗ್ರಾಮ್ಸ್ ಡಬ್ಬಿಯೊಂದಕ್ಕೆ | 1.30 |
| " | 1ರಿಂದ 28 ವರೆಗಿನ ಒಂದು ಪೂರ್ಣ ಸೆಟ್ಟನ್ನು ಒಟ್ಟಿಗೆ ತೆಗೆದುಕೊಂಡರೆ | | 30.00 |
| 33 | ಡಾ॥ ಮೂರ್ತಿಯವರ ಹೆಚ್. ಪಿ. ಪಿ. ಔಷಧಿ | 2 ಡ್ರಾಮಂ ಶೀಶೆಯೊಂದಕ್ಕೆ | 1.00 |
| " | 1ರಿಂದ 26 ಡಿ ವರೆಗಿನ ಒಂದು ಪೂರ್ಣ ಸೆಟ್ಟನ್ನು ಒಟ್ಟಿಗೆ ತೆಗೆದುಕೊಂಡರೆ | | 20.00 |
| 40 | ಹೋಮಿಯೋಪತಿಯ ಗ್ಲಾಂಡುಲರ್ ತಯಾರಿಕೆಗಳು ಮತ್ತು ಚಿಕಿತ್ಸಾ ವಿವರ | 6×ಸತ್ವ–60 ಮಾತ್ರೆಯ ಶೀಶೆ | 1.25 |

| ಪುಟ | ಔಷಧಿಯ ಹೆಸರು | ಪ್ಯಾಕಿಂಗ್ | ಕ್ರಯ |
|---|---|---|---|
| 46 | ಕೆಲ ಅಪೂರ್ವ ಹೋಮಿಯೋಪತಿ ಔಷಧಿಗಳು | 30 ಸತ್ವ 5 ಸಿ. ಸಿ. ಶೀಶೆ | 1.00 |
| " | " | 200 ಸತ್ವ " | 1.25 |
| " | " | 1 M ಸತ್ವ " | 1.50 |
| " | " | 10 M ಸತ್ವ " | 2.00 |
| " | " | C M ಸತ್ವ " | 3.00 |

---

# ನೀವೇಕೆ ಇಂಡಿಯನ್ ಹೋಮಿಯೋಪತಿ ಇನ್‌ಸ್ಟಿಟ್ಯೂಟಿಗೆ ಸೇರಬೇಕು ?

## (ಕೆಲವು ಮುಖ್ಯ ಕಾರಣಗಳು)

೧. ಕನ್ನಡನಾಡಿನಲ್ಲಿಯೇ ಏಕೆ, ಇಡೀ ದಕ್ಷಿಣ ಭಾರತದಲ್ಲಿಯೇ ಈ ಸಂಸ್ಥೆಯು ಹಿರಿಯದು—ಹಿರಿಮೆಯುಳ್ಳದ್ದು.

೨. ಕಳೆದ ಕಾಲು ಶತಮಾನಕ್ಕೂ ಮಿಗಿಲಾಗಿ ಈ ಸಂಸ್ಥೆಯು ತಜ್ಞ ವೈದ್ಯರ ಮೇಲ್ವಿಚಾರಣೆಯಲ್ಲಿ ನಡೆಯುತ್ತಾ ಬರುತ್ತಿದೆ.

೩. ಈ ಸಂಸ್ಥೆಯ ಪಾಠಗಳು ಇಡೀ ಭಾರತದಲ್ಲಿಯೇ ಶ್ರೇಷ್ಠವಾದುವೆಂಬುದನ್ನು ನಿರೂಪಿಸಲ್ಪಟ್ಟಿದೆ. ಪ್ರತಿಯೊಂದು ಪಾಠವೂ ಸರಳವಾಗಿ, ಸವಿಸ್ತಾರವಾಗಿ ಮತ್ತು ಮನಸ್ಸಿಗೆ ನಾಟುವಂತೆ ರಚಿಸಲ್ಪಟ್ಟಿದೆ.

೪. ಪ್ರತಿ ವಿದ್ಯಾರ್ಥಿಯು ಬಗೆಗೂ ಪ್ರತ್ಯೇಕ ಆಸ್ತೆವಹಿಸಿ ಗಮನಿಸಿಕೊಳ್ಳಲಾಗುವುದು. ಅಂದಂದಿನ ಪತ್ರಗಳಿಗೆ ಅಂದಂದೇ ಉತ್ತರಿಸುವುದು ನಮ್ಮ ಸಂಸ್ಥೆಯ ವೈಶಿಷ್ಟ್ಯಗಳಲ್ಲೊಂದು.

೫. ಹೋಮಿಯೋಪತಿಯವರಿಗೆ ಅಗತ್ಯ ಬೇಳುವ ಎಲ್ಲಾ ಸಾಮಗ್ರಿಗಳೂ ನಮ್ಮಲ್ಲಿ ಸಿಕ್ಕುವುವು. ಅವುಗಳನ್ನು ವಿತರಣೆ ಮಾಡುವ ಪ್ರತ್ಯೇಕ ಇಲಾಖೆಯೇ ನಮ್ಮಲ್ಲಿರುವುದು.

೬. ಇಂದು ಒಬ್ಬ ವೈದ್ಯರು ಯಶಸ್ವಿಯಾಗಿ ವೃತ್ತಿ ನಿರ್ವಹಿಸುತ್ತಿದ್ದರೆ—ಅವರು ನಮ್ಮ ವಿದ್ಯಾರ್ಥಿಯಾಗಿಯೇ ಇರಬೇಕು ಇಂಡಿಯನ್ ಹೋಮಿಯೋಪತಿ ಇನ್‌ಸ್ಟಿಟ್ಯೂಟಿನಲ್ಲಿ ವಿದ್ಯಾರ್ಥಿಯಾಗಿದ್ದು, ಅನಂತರ ವೃತ್ತಿ ಕೈಗೊಳ್ಳುವುದರಲ್ಲಿ ಒಂದು ಪ್ರತ್ಯೇಕ ಗೌರವ ಅಡಗಿದೆ.

ಇಂಡಿಯನ್

ಹೋಮಿಯೋಪತಿ ಇನ್ಸ್‌ಟಿಟ್ಯೂಟ್

# ವೈದ್ಯಕೀಯ ಸಲಹಾ ಮಂಡಳಿ

ಗುಣಪಡಿಸಲಾಗದಂತಹ ಗೊಂದಲ ಚಿಹ್ನೆಗಳಿಂದ ಕೂಡಿದ ಕಠಿಣ ವ್ಯಾಧಿಗಳಿಗೆ ನಮ್ಮಿಂದ ನೀವು ಸಲಹೆಯನ್ನು ಪಡೆಯಬಹುದು. ಅಲ್ಲದೆ, ಇತರ ವೈದ್ಯರಿಂದ ಕೈ ಬಿಡಲ್ಪಟ್ಟ, ದೀರ್ಘಕಾಲದ ವ್ಯಾಧಿಗಳ ಬಗೆಗೂ ಸಲಹೆಯನ್ನು ಪಡೆಯಬಹುದು.

ಸಂಬಂಧಪಟ್ಟ ವ್ಯಾಧಿಯ ಕುರಿತ ಸಂಪೂರ್ಣ ಮಾಹಿತಿಯನ್ನು ಅದಕ್ಕೆಂದೇ ನಮ್ಮಲ್ಲಿ ಪ್ರತ್ಯೇಕವಾಗಿ ಅಚ್ಚಾಗಿರುವ ಕೇಸ್‌ಷೀಟನ್ನು (ಕ್ರಯ ೨೫ ಪೈಸೆ) ತರಿಸಿಕೊಂಡು ಅದರಲ್ಲಿ ವಿಷದವಾದ ಹಾಗೂ ಸ್ಪಷ್ಟವಾಗಿ ಬರೆದು ಕಳುಹಿಸಬೇಕು. ಅದಕ್ಕಾಗಿ 0·45 ಪೈಸೆ ಅಂಚೆ ಚೀಟಿಯನ್ನು ಕಳುಹಿಸಿ ಕೊಡಬೇಕು. ಅಲ್ಲದೆ ಅದಕ್ಕಾಗುವ ಅಂಚೆ ವೆಚ್ಚ, ಹಾಗೂ ಸಲಹಾ ಫೀಸಿಗಾಗಿ 5 ರೂ ಗಳನ್ನು ಆನಂತರ ಕೇಸ್‌ಷೀಟಿನೊಡನೆ ಕಳುಹಿಸಿ ಕೊಡಬೇಕು.

ಅವು ನಮ್ಮ ಕೈಗೆ ತಲುಪಿದ ಕೂಡಲೇ ನಮ್ಮ ವೈದ್ಯಕೀಯ ಸಲಹಾ ಮಂಡಳಿಯು ಆ ಕೇಸ್‌ಷೀಟನ್ನು ಪರಿಶೀಲಿಸಿ ಯುಕ್ತವಾದ ಚಿಕಿತ್ಸೆಯನ್ನು ಸೂಚಿಸಲಾಗುವುದು.

ಉಪಯುಕ್ತ ಬೀಳುವ ವಿಶೇಷ ಔಷಧಿಗಳೂ ನಮ್ಮಲ್ಲಿ ಅಗ್ಗದ ಬೆಲೆಯಲ್ಲಿ ದೊರೆಯುವುದು.

